# ಹನಿಗಳು

(ಒಂದು ಚಿಮುಕು)

ಜಿ. ಪಿ. ರಾಜರತ್ನಂ

" ಹನಿ ಕೂಡಿದರೆ ಹಳ್ಳ
ಕಣ ಕೂಡಿದರೆ ಕಲ್ಲು "



ಕರ್ಣಾಟಕ ಸಂಘ
ಶಿವಮೊಗ್ಗ
೧೯೩೩

# ಪ್ರವೇಶ

ಬದುಕನ್ನು ತೇಲಿಸಲು ಮಾಡಲೇ ಬೇಕಾಗಿರುವ ಅನಂತರವಾದ ಕೆಲಸ ಕೋಲಾಹಲಗಳ ನಡುನಡುವೆ ಅಮೃತಸಮವಾದ ವಿರಾಮಗಳು ಆಗಾಗ ಸಿಗುವುದುಂಟು. ಅದುವರೆಗೆ ಮುಚ್ಚಿಕೊಂಡಿದ್ದ ಬಗೆಗಣ್ಣು ಆಗ ತೆರೆಯುವುದುಂಟು. ಅಂತಹ ವೇಳೆಗಳಲ್ಲಿ ಸುತ್ತಿನ ಜಗತ್ತು ಮನಸ್ಸಿನ ವಿಚಿತ್ರ ದರ್ಪಣದಲ್ಲಿ ಮರುಬಿಂಬಿಸುವುದುಂಟು.

ಎದುರಿನಲ್ಲಿ ಕಾಗದದ ಕಟ್ಟು! ಕೆಲದಲ್ಲಿ ಮಸಿಪಾತ್ರೆ! ಕೈಯಲ್ಲಿ ಲೇಖನಿಯ ಕುಂಚಿ! ಕುಂಚಿಯಿಂದ ಆಗಾಗ ಜಗುಳಿದ ಹನಿಗಳು—ಮನಸ್ಸಿನ ವಿಚಿತ್ರ ದರ್ಪಣದಲ್ಲಿಯ ಮರುಬಿಂಬಗಳ ಪಡಿಯಚ್ಚುಗಳು.

ನೀಲದಿಂದ ಬೀಳುವ ಹನಿಗಳು—ಯಾರ ಮನೆಯ ಮುರುಕು ಸೂರನ್ನು ಪ್ರದರ್ಶಿಸಬೇಕೆಂದಾಗಲಿ, ಯಾರ ಒಟ್ಟೆಯನ್ನು ತೋಯಿಸಬೇಕೆಂದಾಗಲಿ, ಯಾವ ಭೂಮಿಯನ್ನು ಫಲವತ್ತು ಮಾಡಬೇಕೆಂದಾಗಲಿ, ಇಲ್ಲ ಯಾವ ಹೊಳೆಯನ್ನು ಉಕ್ಕಿಸಲೆಂದಾಗಲಿ ಬೀಳುವುದಿಲ್ಲ. ಬೀಳುವುದು ಅವುಗಳ ಧರ್ಮ. ಸಲುವು ಬಳುವುವು. ಅಂತೆಯೆ ಈ ಹನಿಗಳು ಕೂಡ.

ಹನಿಗಳನ್ನು ತಿರುಗಿಸಿ ತಿರುಗಿಸಿ ನೋಡಿದರೆ ಹುಚ್ಚಾಗಿ ಕಾಣಬಹುದು, ಪೆಚ್ಚಾಗಿ ಕಾಣಬಹುದು, ಕ್ರೂರವಾಗಿರಬಹುದು, ಅಸಾಧ್ಯವಾಗಿರಬಹುದು.

ಮನಸ್ಸಿನ ವಿಚಿತ್ರವ್ಯಾಪಾರಚಕ್ರವೂ ಒಂದು ಕುಲಾಲ ಚಕ್ರವು.

# ವಿವರ

# ಮೊದಲನೆಯ ಹನಿ

ಮುದ್ದಾದ ಕುರಿಮರಿಯೊಂದು ಒಂದು ಕಾಡಿಗೆ ಹೋಯಿತು. ಆ ಕಾಡಿನ ಮೃಗಗಳು ಕುರಿಮರಿಯನ್ನು ಎಂದೂ ಕಂಡಿರಲಿಲ್ಲ. ಕಾಡಿನ ಪ್ರಾಣಿಗಳೆಲ್ಲವೂ ಅದನ್ನು ಕಂಡು ಜುಗುಪ್ಸೆಯಿಂದ ಮುಖ ತಿರುಗಿಸಿ ಕೊಂಡುವು.

"ಏನು ಕುರಿಯೊ! ಸೊಂಡಿಲಿಲ್ಲ ಗಿಂಡಿಲಿಲ್ಲ!" ಎಂದು ಆನೆಯು ಘೀಂಕರಿಸಿತು.

ಸಿಂಹವು ಎದ್ದು "ಕೂಗಿದರೆ ನನ್ನ ಹಾಗೆ ಕೂಗಬೇಕು. 'ಬ್ಯಾ! ಬ್ಯಾ!' ಎಂದರೂ ಒಂದೆ, ಸುಮ್ಮನೆ ತುಟಿಗೆ ಹಲಸಿನ ಅಂಟು ಹಾಕಿ ಕೊಂಡಿದ್ದರೂ ಒಂದೆ!" ಎಂದು ಕುರಿಯನ್ನು ಅಣಕಿಸಲು 'ಬ್ಯಾ' ಎಂದಿತು. ಸಿಂಹವಾದರೆ ತಾನೆ ಏನು? ಕುರಿಯಂತೆ ಕೂಗಲಾಗಬೇಕಲ್ಲ!

ನಡುವೆ ಕೋತಿಯು ಜಾಯಿಕ್ಕಿ "ಛಂಗಛಂಗನೆ ಮರ ಹಾರುವುದಕ್ಕೆ ಬರದೆ ಇರುವುದಿರಲಿ, ಕೊಂಬೆ ಹತ್ತುವುದಕ್ಕೆ ಕೂಡ ಬರುವುದಿಲ್ಲ! ಶುದ್ಧ ವಿಚಿತ್ರಮೃಗ! ಓಡಬೇಕೆಂದರೆ ಕತ್ತೆ ಬದ್ದ ಹಾಗೆ ಹಿಂಗಾಲು ಎಸೆ ಯುತ್ತ ಮಾನಮರ್ಯಾದೆ ಬಿಟ್ಟು ಕುಣಿಯುತ್ತದೆ. ನನ್ನಿಂದ ಕಲಿತು ಕೊಳ್ಳಬಾರದೆ ಓಡುವ ನಾಜೋಕನ್ನು?" ಎಂದಿತು.

ಘೆಂಡಾಮೃಗವು "ಹಾ! ಅದರ ಮೈಯೊ! ಗೆಜ್ಜುಗದಷ್ಟು! ಪೀಚು ಪೀಚಾಗಿ! ಥು!" ಎಂದಿತು.

ಆಗ ತಾನೆ ಒಂದು ತೋಳವು ಬಂದಿತು. "ಇದೆಲ್ಲ ವಿಚಿತ್ರವಲ್ಲ. ತಿನ್ನುವ ತಿಂಡಿ ನಾನು ಯಾರಿಗಾದರೂ ಕೊಡುವುದೆಂದರೆ ಎಷ್ಟು ಅಪ ರೂಪ—ನಿಮಗೇ ಗೊತ್ತು. ಅಂಥದರಲ್ಲಿಯೂ ಏನೋ ಹೊಸದಾಗಿ ಬಂದಿದೆ ಎಂದು ನಾನು ತಿನ್ನುತ್ತಿದ್ದ ಜಿಂಕೆಯ ಮಾಂಸ ಕೊಡಹೋದರೆ ಬೇಡ ಎನ್ನುತ್ತ ಸೊಪ್ಪು ಮೇಯುತ್ತದಲ್ಲ ಆ ಕುರಿ! ಮಾಂಸ ತಿನ್ನದ ಮೇಲೆ ಏಕೆ ಹುಟ್ಟಿತಂತೆ ಪ್ರಪಂಚದಲ್ಲಿ?" ಎಂದಿತು.

ಅಂತೂ ಆ ಕಾಡುಮೃಗಗಳ ಕೈಲಿ ಸಿಕ್ಕಿ ಆ ಮುದ್ದಾದ ಕುರಿ ಮುರಿಯು ಬರಿಯ ತಪ್ಪಿನ ಮುದ್ದೆಯಾಯಿತು.

ಒಂದು ದಿನ ಆ ಕಾಡಿನಲ್ಲಿ ದಾರಿ ತಪ್ಪಿದವನೊಬ್ಬನು ಆ ಮರಿಯನ್ನು ಕಂಡು "ಎಂತಹ ಮುದ್ದು ಕುರಿ" ಎಂದು ಆಶ್ಚರ್ಯಪಟ್ಟು ಅದನ್ನು ಮನೆಗೆ ತಂದು ಸಾಕಿದನು.

ಅಷ್ಟು ಮೃಗಗಳ ದೃಷ್ಟಿಯಲ್ಲಿ ಮುದ್ದಿನ ಕುರಿಯು ತಪ್ಪಿನ ಮುದ್ದೆಯಾದರೂ ಒಬ್ಬ ಮನುಷ್ಯನ ದೃಷ್ಟಿಗಾದರೂ ಅದರ ಸಹಜಸ್ಥಿತಿಯು ಕಾಣಿಸಿಕೊಂಡಿತಷ್ಟೆ!

ಅದೆ ಸಾಕು.

# ಏಕಾದಶಿ

....ಹೇಳೊ ಬೇಗ. ಸ್ಕೂಲಿಗೆ ಹೊತ್ತಾಯಿತಲ್ಲೊ! ಹೇಳೊ!

ಗುರುದೈವಂ ವಿದ್ಯಾರ್ಥಿಗೆ
ತರುಣಿಗೆ ಪತಿದೈವಮುಳಿದ ಮನುಜರ್ಗೆಲ್ಲಂ

....ಹೇಳೊ....ಎರಡೂವರೆ ಆಯಿತು....ವಿದ್ಯಾರ್ಥಿಗೆ=ವಿದ್ಯಾರ್ಥಿಗೆ, ಗುರು=ಗುರುವು, ದೈವಂ=ದೇವರು ; ಪತಿ=ಗಂಡನು........ಮೂರು ಹೊತ್ತೂ ಮನೆಯಲ್ಲಿ ಬಿದ್ದಿರುತ್ತಾರಲ್ಲ, ಹೇಳಿಕೊಡಬಾರದೆ ಹುಡುಗನಿಗೆ! ....ಹೇಳೊ !....ಪತಿ=ಗಂಡನು....

....ಬನ್ನಿ ಪಾತಮ್ಮನವರೆ! ಊಟಾ ಆಯಿತೆ? ಏನಡಿಗೆ?....ಹಾಂ! ಇವತ್ತು ಏಕಾದಶಿಯೆ!....ಅಯ್ಯೋ! ಅಯ್ಯೋ! ಏಕಾದಶಿ!....ಯಾಕೆ ಅಂತ ಕೇಳುತೀರಲ್ಲ ಪಾತಮ್ಮ!....ಏಕಾದಶಿ! ಅಯ್ಯೋ! ಊಟ ಆಗಿ ಹೋಯ್ತಲ್ಲ ಪಾತಮ್ಮ!....ಅಯ್ಯೋ!........

....ಏನು ಅಂದರೆ! ಇವತ್ತು ಬೆಳಿಗ್ಗೆ ಹುಡುಗನಿಗೆ ಕ್ಷೌರಕ್ಕೆ ಪಂಚಾಂಗ ನೋಡುತ್ತಿದ್ದಿರಲ್ಲ, ಏಕಾದಶಿ ಅಂತ ಬೊಗಳಬಾರದಿತ್ತೆ!.... ಅಯ್ಯೋ! ಏಕಾದಶಿ! ಊಟ ಆಗಿಹೋಯಿತು! ಅಯ್ಯೋ! ಏನು ಪಾಪ ಬರುತ್ತೊ! ಯಾವ ನರಕಕ್ಕೆ ಹೋಗ್ತೇನೊ! ದೇವರೆ!........

....ರೋಗ ರೋಗ ಅಂತ ಮನೆಯಲ್ಲಿ ಬಿದ್ದಿದ್ದೀರಲ್ಲ, ಏಕಾದಶಿ ಅಂತ ಬಗಳಬಾರದೆ! ನಿಮಗೇನು ಆಚಾರವಿಲ್ಲ, ವ್ಯವಹಾರವಿಲ್ಲ! ಇದ್ದರೆ ನಿಮ್ಮಂಥ ಗಂಡ ಇರಬೇಕು!....ಅಯ್ಯೋ! ನರಕ! ಅಯ್ಯೋ!....ಎಲ್ಲಾ ಹಾಳಾಗಿಹೋಯ್ತು!........

....ಹೇಳೋ! ನೀನು ಬೇರೆ ನನಗೆ! ಹೇಳು!....ಪತಿ=ಗಂಡನು, ತರುಣಿಗೆ=ಹೆಂಗಸಿಗೆ....ಏಕಾದಶಿ ಅಂತ ಬಗುಳುವುದಕ್ಕೆ ಏನು ಬಂದಿತ್ತೊ ಇವರಿಗೆ!.....ತರುಣಗೆ=ಹೆಂಗಸಿಗೆ, ದೈವಂ=ದೇವರು..... ಅಯ್ಯೋ! ಏಕಾದಶಿ!........

# ಎಡಬಿಡಂಗಿ

ಜರಿರುಮಾಲು ರಾಮರಾಯರು ಪತ್ನೀಪುತ್ರಸಮೇತರಾಗಿ ರೈಲಿನಲ್ಲಿ ಬಿಜಯಮಾಡಿಸಿದ್ದರು. ಅವರು ಕುಳಿತಿದ್ದ ಗಾಡಿಯ ಬಳಿ ಕುರುಡನೊಬ್ಬನು ಬಂದು "ದರುಮ ಸೋಮಿ!" ಎಂದ. ರಾಯರು ಪಂಚೆಯ ಜರಿಯನ್ನು ತೀಡುತ್ತ "ಸೂ—ಮಗನೆ! ಧರ್ಮವಂತೆ ಧರ್ಮ! ನಾವು ಧರ್ಮ ಎಂದು ಕೊಡುವುದು ಈ ಸೂ—ಮಗ ಜೇಡಿ ಹೊಡೆಯುವುದು! ಏನೂ ಇಲ್ಲ ಹೋಗು!" ಎಂದು ಗದರಿಸಿದರು.

"ಒಂದು ಕಾಸು, ಸೋಮಿ!"

"ಒಂದೂ ಕಾಸೂ ಇಲ್ಲ, ಅರಕಾಸೂ ಇಲ್ಲ! ತೊಲಗು!"

ಭಿಕ್ಷುಕನು ತೊಲಗಿದನು. ರೈಲೂ ತೊಲಗಿತು.

"ಈ ಸೂ—ಮಕ್ಕಳಿಗೆ ಕೊಡುವುದಕ್ಕೇ ನಾವು ಕಷ್ಟಪಟ್ಟು ಸಂಪಾದಿಸುವುದು!" ಎಂದರು ರಾಯರು.

*　　　*　　　*　　　*　　　*

"ಅಣ್ಣಾ! ಕಾವೇರಿ ಬಂತು, ಕಾವೇರಿ!" ಎಂದು ರಾಯರ ಮಕ್ಕಳೆಲ್ಲರೂ ಕೂಗಿದರು.

"ಕಾವೇರಿಗೆ ಹಾಕುವುದಕ್ಕೆ ಕಾಸು ಎಲ್ಲಾ ಇಟ್ಟುಕೊಂಡಿದ್ದೀರೊ ಇಲ್ಲವೊ?" ಎಂದು ರಾಯರು ಕೇಳಿದರು. ಕಾವೇರಿಗೆ ಕಾಸೆಸೆಯುವುದು ಕೈವಲ್ಯಕ್ಕೆ ಕಾಲುಮಣೆ ಎಂದು ಅವರು ಕಲಿತಿದ್ದರು. ಮಕ್ಕಳಿಗೂ ಕಲಿಸುತ್ತಿದ್ದರು.

"ಅಣ್ಣಾ! ನನ್ನ ಕಾಸೆಲ್ಲೊ ಕಾಣೆ ಅಣ್ಣಾ!" ಎಂದು ರಾಯರ ಎರಡನೆಯ ಮಗಳು ಅಳತೊಡಗಿದಳು.

"ಪರವಾ ಇಲ್ಲಮ್ಮ. ಇನ್ನೊಂದು ಕಾಸು ಕೊಡುತ್ತೇನೆ. ಅಳಬೇಡ" ಎಂದು ರಾಯರು ಕಾವೇರಿ ಎಲ್ಲಿ ಕಳೆದುಹೋಗುತ್ತದೊ ಎಂಬ ಅವಸರದಿಂದ ಗಣೇಶನ ಹೊಟ್ಟೆಯಂತಿದ್ದ ತಮ್ಮ ಹಣದ ಚೀಲವನ್ನು

ಮಡಿಲಿಗೆ ಬಗ್ಗಿಸಿಕೊಂಡು ಬಿದಕಿದರು. ಆದರಲ್ಲಿ ಬೆಳ್ಳಿಯ ಎಂಟಾಣೆಗಿಂತ ಚಿಕ್ಕ ನಾಣ್ಯವು ಕಣ್ಣಿಗೆ ಕಾಣಿಸಲಿಲ್ಲ. ರಾಯರು "ತೆಗೊ! ತೆಗೊ! ಇದನ್ನೆ ಹಾಕು!" ಎಂದು ಅವಸರದಲ್ಲಿ ಎಂಟಾಣೆಯ ನಾಣ್ಯವನ್ನೇ ಕಾವೇರಿಗೆ ಬಿಸಾಡಿಸಿ ಬೆಟ್ಟ ಕಡಿದವರಂತೆ ನಿಟ್ಟುಸಿರಿಟ್ಟರು.

ಆ ಚೀಲಕ್ಕೆ ಪುನಃ ಹಣವನ್ನು ತುಂಬಿಕೊಳ್ಳುವಾಗ ರೂಪಾಯಿಗಳ ಮರೆಯಿಂದ ಒಂದು ಬಿಡಿಕಾಸು ಇಣಿಕಿ ನೋಡಿ "ನೋಡಿದೆಯೊ! ಕೊಟ್ಟೆ ನಿನಗೆ ಗಸ್ತು!" ಎಂದು ಕಣ್ಣು ಹಾರಿಸಿತು.

ರಾಯರದನ್ನು ನೋಡಿದರು. ಬೆಪ್ಪಾದರು. ಗೊಳೋ ಎಂದು ಅತ್ತರು.

# ಚಿನ್ನದ ಗಂಟೆ ಚಿಕ್ಕರಂಗರಾಯರು

“ಲಕ್ಷ ಹೊಡಿಯುದೆ ಇದ್ದರೂ ಬಿಚ್ಚಿದ ಕೈ ಮುಚ್ಚಿದ ಮಹರಾಯು ನಲ್ಲ. ದಾನ ಧರ್ಮ ಎರಡೂ ಅವನ ಕಾಲುಗಳು. ಪ್ರತಿದಿನವೂ ದಾನ ಮಾಡಿದ ಹೊರತು ತಿಂದನ್ನ ಅವನಿಗೆ ಜೀರ್ಣಿಸುವುದಿಲ್ಲ. ಬಹಳ ದಾನಿ. ಬಹಳ ಧರ್ಮಿ” ಎಂದು ಮಹಾ ಸನ್ನಿಧಾನವು ತಮ್ಮ ಖಾಸಸ್ವರದಿಂದ ಚಿನ್ನದ ಗಂಟೆ ಚಿಕ್ಕರಂಗರಾಯುರನ್ನು “ದಾನಿ ತಾರಾಗಡಣಭಾಸ್ಕರ”, “ಭಾಸ್ವದ್ದಾನಾರ್ಕ ಪ್ರಭಾಪುಂಜ”, “ಕಾರ್ಪಣ್ಯೋಣ್ಣೌಘ ಕಾಳಾನಲ”, “ದಾನ ಧಾರಾ ವರ್ಷಿತಾಖಂಡಲ” ಇತ್ಯನೇಕ ಬಿರುದಾಂಕಿತರನ್ನಾಗಿ ಮಾಡಿತು. ಚಿನ್ನದ ಗಂಟೆ ಚಿಕ್ಕರಂಗರಾಯರ ಹೆಸರನ್ನು ಕೇಳದವರೇ ಇರಲಿಲ್ಲ.

ಮೊನ್ನೆ ನನ್ನ ಮೊಮ್ಮೊಗನ ಉಪನಯನ ಮಹೋತ್ಸವವಾಗ ಬಂದುದರಿಂದ ಚಿನ್ನದ ಗಂಟೆಯವರ ನೆನಪಾಯಿತು ; ಏನೋ ಅವರ ದಾನ ಹಸ್ತವು ನಮ್ಮ ಪಾತ್ರಹಸ್ತದ ಮೇಲಿದ್ದರೆ ನಮಗೂ ಸಂತೋಷಪ್ರದ, ಅವರಿಗೂ ಪುಣ್ಯಪ್ರದ ಎನ್ನಿಸಿತು. ನೆಟ್ಟನೆ ಅವರ ಮನೆಗೆ ಹೋದೆ. ಅವರು ಒಳಗೋಣೆಯಲ್ಲಿ ಯಾರೋ ಹೆಂಗಸಿನ ಒಳಿ ಮಾತನಾಡುತ್ತಿದ್ದರು. ಅವರ ಮಾತು ತಾನಾಗಿಯೇ ನನ್ನ ಕಿವಿಗೆ ಬಂದು ತಾಗುತ್ತಿತ್ತು.

“ಏನೋ ತಮ್ಮಂತಹವರಿಂದ ನಾವು ಉದ್ಧಾರವಾಗಬೇಕು. ಈಗ ತಾವು ಕೊಟ್ಟ ಹತ್ತು ರೂಪಾಯಿನಿಂದ ಎಷ್ಟೋ ಉಪಯೋಗವಾಗಿದೆ. ಇಲ್ಲದಿದ್ದಲ್ಲಿ ಮನೆಯಲ್ಲಿ ಔಷಧಕ್ಕೆ ಏನು ಪಾಡುಪಡಬೇಕಾಗಿತ್ತೊ ದೇವರೆ ಬಲ್ಲ....”

“ಹತ್ತು ರೂಪಾಯಿ ಯಾವ ಮೂಲೆಗೆ! ಒಂದು ಐವತ್ತಾದರೂ ಆದರೆ........(ಪೆಟಾರಿ ತೆಗೆದ ಸದ್ದಾಯ್ತು. ಥೈಲಿ ಬಿಚ್ಚಿದ ಶಬ್ದವಾಯ್ತು.) ........ನಿಮ್ಮಂತಹವರಿಗೆ ದಾನ ಮಾಡುವುದಕ್ಕಲ್ಲವೆ ದೇವರು ನಮಗೆ ಕೊಟ್ಟಿರುವುದು! ಆದರೆ........”

ಒಳಗೆ ಏನೋ ಪಿಸುಗುಟ್ಟಿದಂತಾಯ್ತು....ಕುರ್ಚಿ ಬಿದ್ದ ಸದ್ದಾಯ್ತು....ರೂಪಾಯಿ ಚೆಲ್ಲಿದಂತಾಯ್ತು....ಧಟಾರನೆ ಕೋಣೆಯ ಬಾಗಿಲು ತೆರೆಯಿತು....ಬಂದವಳು ಹೆಂಗಸು....ಮುಷ್ಟಿ ಹಿಡಿದ ಬರಿಗೈ....ಬಿಚ್ಚಿದ ತುರುಬು....ತೊಯ್ದ ಕಣ್ಣು....ನಿರ್ವರ್ಣವಾದ ಕೆಳದುಟಿ....ಕೆದರಿದ ಕುಂಕುಮ....ಬೆವತ ಮುಖ....

ಕೋಣೆಯಿಂದ ಬಂದವಳು ಅಕ್ಕಪಕ್ಕ ನೋಡದೆ ಓಡಿಹೋದಳು.

ಮೊಮ್ಮಗನ ಯಜ್ಞೋಪವೀತ ಮಹೋತ್ಸವಕ್ಕೆ ಮೂರು ಎಳೆ ದಾರವಾದರೆ ಸಾಕು ಎನ್ನಿಸಿತು. ಹಿಂದಿರುಗಿದೆ.

# ಜಮೀನುದಾರರ ಧರ್ಮ

ತೆಂಗಿನಭಾವಿ ಎಂಬುದು ಒಂದು ಊರು. ನಾನು ಒಂದು ಸಲ ಅಲ್ಲಿಗೆ ಹೋಗಿದ್ದಾಗ ನಾನು ಇಳಿದುಕೊಂಡಿದ್ದ ಮನೆಯವರು ಆ ಊರಿನ ಕಿರುಗುಂಟೆ ಎಂಬ ಕೊಳವು ನೋಡತಕ್ಕುದೆಂದು ಹೇಳಿ, ನನಗೊಬ್ಬ ಮಾರ್ಗದರ್ಶಿಯನ್ನು ಹೊಂದಿಸಿಕೊಟ್ಟರು.

ಮಾರ್ಗದರ್ಶಿಯು ನನ್ನನ್ನು ಕಿರುಗುಂಟೆಯ ಬಳಿ ಕರೆತಂದನು. ಕಿರುಗುಂಟೆಯು ಒಂದು ಜಲಾಶಯ. ಆ ಊರಿನ ನೀರಿನ ಸರಬರಾಯಿಗೆ ಮುಖ್ಯವಾದ ಜಲಾಶಯ. ಬಲು ದೊಡ್ಡ ಕೊಳ. ಆ ಊರಿನ ಅತಿ ವೃದ್ಧರು ಕೂಡ ಆ ಕೊಳದಲ್ಲಿ ನೀರು ಕಡಿಮೆಯಾದುದನ್ನು ಕಂಡಿರಲ್ಲಿಲ್ಲ ವಂತೆ. ಒಂದು ಸಂಕ್ಷೇಪಸಾಗರದಂತಿದ್ದ ಆ ಜಲಾಶಯವನ್ನು ಕಂಡು ಮಾರುವೋದ ನನಗೆ ಅಂತಹ ಕೊಳವನ್ನು ಕಟ್ಟಿಸಿದ ಧರ್ಮಿ ಯಾರೆಂಬು ದನ್ನು ತಿಳಿಯುವ ಕುತೂಹಲ ಕೂಡ ಬರಲಿಲ್ಲ.

ಆ ಕೊಳದಲ್ಲಿ ನನ್ನನ್ನು ನಾನು ಮರೆತು ಮಾರ್ಗದರ್ಶಿಯೊಡನೆ ಅದರ ಸುತ್ತ ನಡೆದೆ. ಕೊಳದ ಸುತ್ತ ಎರಡು ಅಡಿಯೆತ್ತರದ ಒಂದು ಮಣ್ಣು ಗೋಡೆಯೆದ್ದಿತ್ತು. ಅದರಲ್ಲಿ ನಾಲ್ಕು ದಿಕ್ಕುಗಳಿಗೂ ನಾಲ್ಕು ಕಂಡಿ ಗಳಿದ್ದುವು. ಸುತ್ತುತ್ತ ಬರುವಾಗ ದಕ್ಷಿಣದ ಕಂಡಿಯ ಬಳಿ ಇದ್ದ ಒಂದು ಶಿಲಾಲೇಖವನ್ನು ಕಂಡೆ. ಅದರಲ್ಲಿ "ತೆಂಗಿನಭಾವಿ ಜೋಡಿದಾರರು ರಂಗಯ್ಯನವರ ಧರ್ಮ" ಎಂದಿತ್ತು.

ಮಾರ್ಗದರ್ಶಿಯ ಕಡೆ ತಿರುಗಿ "ಏನು ಗೌಡ! ಜೋಡಿದಾರರು ಇದಕ್ಕೆ ಲಕ್ಷಾಂತರ ರೂಪಾಯಿ ಮುಟ್ಟಿಸಿರಬೇಕಲ್ಲ?" ಎಂದೆ.

"ಲಕ್ಷಾನೂ ಇಲ್ಲ, ಗಿಕ್ಷಾನೂ ಇಲ್ಲ ಸೋಮಿ! ಜಿಪುಣ ಮನುಷ್ಯ! ಮಣ್ಣಿಗೆ ಕಾಸಿಲ್ಲ. ಒಂದಾಣೆ ಕೊಡುವ ಕಡೆ ಒಂದು ಕಾಸು ಕೊಟ್ಟು ಆಳು ಬಿಟ್ಟಿದಾನೆ. ಐವತ್ತು ರೂಪಾಯಿ ಮೂರಾಣೆ ಆರುಕಾಸಿನ ಮೇಲೆ ಒಂದು ಕಾಸೂ ಅವನಿಗೆ ತಗುಲಿಲ್ಲ."

"ಛೆ! ಎಲ್ಲಾದರೂ ಹುಡುಗಾಟವೆ! ಇಷ್ಟು ದೊಡ್ಡ ಕೊಳಕ್ಕೆ ಐವತ್ತು ರೂಪಾಯಿ ಮೂರೂವರೆಯಾಣೆ! ಅಗೆಸೋದು ಒಂದಕ್ಕೆ ಕೊಡಬೇಡವೆ!"

ಗೌಡನು ಗಟ್ಟಿಯಾಗಿ ನಕ್ಕು "ಜೋಡಿದಾರ ಅಲ್ಲ ಸೋಮು, ಕೊಳ ಕಟ್ಟಿಸಿದವನು. ಯಾರೋ ಪುಣ್ಯಾತ್ಮರು ಈ ಕೊಳ ಕಟ್ಟಿಸಿ ಕಿರುಗುಂಟೆ ಅಂತ ಹೆಸರಿಟ್ಟರು—ಈ ದೊಡ್ಡ ಕೊಳಕ್ಕೆ! ಈಗ ಇನ್ನೂರು ವರುಷದಿಂದಿದೆ ಈ ಕೆರೆ! ಜೋಡಿದಾರನಿಗೆ ಇನ್ನೂ ಮುವ್ವತ್ತೈದು! ಮಾಡಿಸಿದವರು ತಾವು ಮಾಡಿದುದು ಎಂದು ಹೇಳದೆ, ತಾವು ಮಾಡಿದುದು ಏನು ಮಹಾ ಎಂದು ಕಿರುಗುಂಟೆ ಎಂದು ಇದಕ್ಕೆ ಹೆಸರಿಟ್ಟರೆ—ಈ ಜೋಡಿದಾರ ಪುಟಕೋಸಿ ಗೋಡೆ ಹಾಕಿಸಿ ಕಲ್ಲ ಮೇಲೆಲ್ಲ ತನ್ನ ಹೆಸರು ಕೆತ್ತಿಸಿದ್ದಾನೆ" ಎಂದ.

ಸುಮ್ಮನಿದ್ದೆ.

ಗೌಡ ಇನ್ನೂ ಹೇಳಿದ "ಆಗಲೇ ನಾವು ಹೇಳಿದೆವು ಬುದ್ದಿ, ಈ ಅಲ್ಪಕ್ಕೆಲ್ಲ ಏನು ಬರೆಸುವುದು ಅಂತ. ಕೇಳಲಿಲ್ಲ ಅವನು. ಇರಲಿ ಎಂದ. ಏನೊ! ಬಂದವರು ಈ ಕೊಳ ಜೋಡಿದಾರನ ಧರ್ಮ ಎಂದು ತಿಳಿಯದೆ ತಿಳಿದುಕೊಂಡು ಹೋದರೆ ಹೋಗಲಿ ಅಂತ ಇರಬಹುದು......"

"ಛೆ! ಎಲ್ಲಾದರೂ ಉಂಟೇನಯ್ಯ ಹಾಗೆ........"

"ನಿಮಗೆ ಗೊತ್ತಿಲ್ಲ ಸೋಮಿ, ನೀವಿನ್ನೂ ಚಿಕ್ಕವರು. ಪ್ರಪಂಚದ ಯವಾರ ನಿಮಗಿನ್ನೂ ಗೊತ್ತಿಲ್ಲ. ಹುಟ್ಟಿದ ದಿನದಿಂದ ಈ ಪ್ರಪಂಚ ನೋಡಿ ನೋಡಿ ನೋಡಿ ನನಗೆ ಕಣ್ಣು ಗುಳಿ ಬಿದ್ದುಹೋಗಿದೆ. ನನ್ನ ಕೇಳಿ ಹೇಳುತ್ತೇನೆ. ಹಿಂದಿನವರ ಧರ್ಮಕ್ಕೂ ಈಗಿನವರ ಧರ್ಮಕ್ಕೂ........"

# ನಮ್ಮ ಗುರುಗಳು

ಈಗ ನಲವತ್ತು ವರುಷಗಳ ಕೆಳಗೆ ನಮ್ಮ ಸಿರಿಪುರದ ಧರ್ಮಸಿಂಹಾಸನವನ್ನು ಅಲಂಕರಿಸಿದ್ದವರು ಜಿತಕಾಮರೆಂಬವರು. ಜಿತಕಾಮರ ಕೀರ್ತಿಲತೆಯು ಆಸೇತು ಹಿಮಾಚಲ ಪರ್ಯಂತ ಹಬ್ಬಿತ್ತು. ಗುರುಗಳ ದರ್ಶನದಿಂದ ಪುನೀತರಾಗಲು ಬಯಸಿ ಭಕ್ತಕೋಟಿಯು ಮೂಲೆ ಮೂಲೆಗಳಿಂದ ಬರುತ್ತಿತ್ತು. ಭಕ್ತರಿಂದ ಅವರ ಸಿಂಹಾಸನಕ್ಕೆ ಬರುತ್ತಿದ್ದ ಹುಟ್ಟುವಳಿಯಲ್ಲಿ ಅರ್ಧವಾದರೂ ಒಬ್ಬ ರಾಜನಿಗೆ ಬರುತ್ತಿದ್ದದ್ದರೆ............!

ಜಿತಕಾಮರು ಮಹತ್ವಪೂರ್ಣರು. ಮಹತ್ವಪೂರ್ಣರಿಗೆಲ್ಲ ಒಂದು ಅಲ್ಪವಾದ ವೈಶಿಷ್ಟ್ಯವಿರುವುದುಂಟು. ಜಿತಕಾಮರಲ್ಲಿಯೂ ಒಂದು ಚಿಕ್ಕ ವೈಶಿಷ್ಟ್ಯವಿತ್ತು. ತಮ್ಮ ಸ್ವಂತ ಪುಸ್ತಕ ಭಂಡಾರದಿಂದ ಯಾರಿಗೂ ಪುಸ್ತಕ ಕೊಡುತ್ತಿರಲಿಲ್ಲ. ಪ್ರತಿ ಪುಸ್ತಕಕ್ಕೂ ತಾವೇ ಸ್ವತಃ ರಟ್ಟು ಹಾಕುವ ಪದ್ಧತಿ ಇಟ್ಟಿದ್ದರು.

ಹೀಗಿರಲು "ಜಾತಸ್ಯ ಮರಣಂ ಧ್ರುವಂ" ಎಂಬಂತೆ ಜಿತಕಾಮರು ನಿರ್ಯಾಣಹೊಂದಿದರು. ಮಠದ ಅಧಿಕಾರಿಗಳು ಮುಂದಿನ ಧರ್ಮಸಿಂಹಾಸನಾಧಿಕಾರಿಗಳಾಗಲೋಸುಗ ಸಂಸ್ಕೃತ ಅಭ್ಯಾಸ ಮಾಡುತ್ತಿದ್ದ ಹದಿನೇಳು ವರುಷದ ನಾರಾಯಣನೆಂಬ—ಬ್ರಹ್ಮಚಾರಿಯೆನಲಾರೆ—ಮದುವೆಯಿಲ್ಲದ ಹುಡುಗನನ್ನು ಪಟ್ಟಕ್ಕೆ ತಂದರು. ನಾರಾಯಣನಿಗೆ ವಿಷಯ ನಿರ್ಲೇಪರೆಂದು ನಾಮಕರಣವಾಯಿತು!

ಪಟ್ಟಕ್ಕೆ ಬಂದ ಹದಿನೈದು ದಿನಗಳೊಳಗೆ ವಿಷಯ ನಿರ್ಲೇಪರು ಜಿತಕಾಮರ ಸ್ವಂತ ಪುಸ್ತಕ ಭಂಡಾರವನ್ನು ಪರೀಕ್ಷಿಸುತ್ತಿದ್ದರು. ಆ ಪುಸ್ತಕಗಳೆಲ್ಲವುಗಳ ರಟ್ಟುಗಳೂ ಹೊಸದಾಗಿದ್ದುವು. ಆದರೆ ಒಂದು ಸುಂದರಕಾಂಡ ರಾಮಾಯಣದ ಪ್ರತಿಯ ರಟ್ಟು ಮಾತ್ರ ಮಾಸಲಾಗಿತ್ತು. ವಿಷಯ ನಿರ್ಲೇಪರು ಹೊಸ ರಟ್ಟು ಹೊದಿಸಬೇಕೆಂದು ಮಾಸಲು ರಟ್ಟನ್ನು ಸುಲಿದರು. ಒಳಗಿಂದ ಐದಾರು ಪಾಶ್ಚಾತ್ಯ ನಗ್ನ ಚಿತ್ರಗಳು ಹೊರಗುರುಳಿದುವು!

ವಿಷಯ ನಿರ್ಲೇಪರು ಕುತೂಹಲಿಗಳಾಗಿ ಅವುಗಳನ್ನು ಕೈಗೆತ್ತಿಕೊಂಡರು. ಮೈ ಜುಮ್ಮೆಂದಿತು. ಚಿತಕಾಮದಲ್ಲಿ ಸಂದೇಹವೆನಿಸಿತು. ಆದರೆ ದೊಡ್ಡವರಲ್ಲಿ ತಪ್ಪೆಣಿಸುವುದುಂಟೆ! ವಿಷಯ ನಿರ್ಲೇಪರು ಅದನ್ನು ತಿಳಿದು ಅಂತೆಯೆ ಎಣಿಸದೆ, ಎದ್ದು ಕೊಠಡಿಯ ಬಾಗಿಲಿಕ್ಕಿ ಕೈಲಿದ್ದ ಪಠಗಳಲ್ಲಿ ಅರಳಿಸಿದ ಕಣ್ಣನ್ನು ನೆಟ್ಟು ತದೇಕಧ್ಯಾನಚಿತ್ತರಾದರು!

# ಬಡವರಾಧಾರಿ

ಹೊನ್ನು ಹೊಳೆ ನಮ್ಮ ಸಿರಿಪುರದ ಹಿರಿಯ ಹೊಳೆ. ಈಗ ಎರಡ ವರುಷಗಳ ಕೆಳಗೆ ಅಲ್ಲಿಯ ದೊಡ್ಡ ಕಟ್ಟೆ ಕಿತ್ತುಹೋಯಿತು. ಕಟ್ಟೆಯ ಕೆಳಗಿದ್ದ ಗ್ರಾಮಗಳಲ್ಲ ಅನೇಕ ಕೊಚ್ಚಿಹೋಗಿ ಜನರಿಗೆ ಬಹಳ ನಷ್ ವಾಯಿತು.

ಸಿರಿಪುರದ ಜಹಗೀರುದಾರರು ಜನರ ಗೋಳನ್ನು ನಿವಾರಿಸಲೋಸು ಪುರದ ಮುಖಂಡರನ್ನೆಲ್ಲ ಕೂಡಿಸಿ ಒಂದು ಸಮಿತಿ ರಚಿಸಿದರು. ಸಮಿತಿ ಜಹಗೀರುದಾರರೇ ಅಧ್ಯಕ್ಷರು. ಒಂದು ಫಂಡು ಕೂಡಿಸುವ ಉದ್ದೇ ದಿಂದ ಸಮಿತಿಯವರು ಕೆಲವು ಕಾಯಿದೆಗಳನ್ನು ತಯಾರುಮಾಡಿದ ಮೇ ಸಮಿತಿಯ ಕಾರ್ಯದರ್ಶಿಯು ಫಂಡು ಪುಸ್ತಕವನ್ನು ಬಿಚ್ಚಿ ಜಹಗೀರ ದಾರರ ಮುಂದಿಟ್ಟ. ಜಹಗೀರುದಾರರು "ನಾವು ಮಾಡುವ ಕೆಲ ನಾವು ನಿರ್ವಂಚನೆಯಾಗಿ ಮಾಡೋಣಂತೆ. ಹಾಕುವವರು ಒಂದ ಹಾಕಲಿ" ಎಂದು ನಿದಾನವಾಗಿ ಹೇಳುತ್ತ ಪುಸ್ತಕ ಮುಚ್ಚಿದರು. ಅಧ್ ಕ್ಷರ ಪಲ್ಲವಿಯೇ ಸದಸ್ಯರಿಗೆ ಅನುಪಲ್ಲವಿಯಾಯಿತು.

ಸಮಿತಿಯ ಕೈಕೆಳಗೆ ಒಂದು ಉಪಸಮಿತಿಯ ರಚನೆಯಾಯಿತು ಅಧ್ಯಕ್ಷರ ಪಲ್ಲವಿಯೇ ಉಪಸಮಿತಿಗೆ ಚರಣಗಳಾದುವು. ಕಡೆಗೆ ಕಾರ್ಯ ದರ್ಶಿಯು ಫಂಡಿಗೆ ಎಲ್ಲರೂ ಉದಾರವಾಗಿ ಸಹಾಯಮಾಡಬೇಕೆಂದ "ಸಿರಿಪುರದ ವಾರ್ತಾತರಂಗ" ದ ಮೂಲಕ ಪ್ರಾರ್ಥಿಸಿದ.

ಪ್ರಕಟಿಸಿ ವಾರವಾದರೂ ಫಂಡಿಗೆ ಕಾಸೂ ಕೂಡಿರಲಿಲ್ಲ. ಎಂಟನೆಯ ದಿನ ಸಂಜೆ ಹಣ್ಣು ಹಣ್ಣು ಮುದುಕಿಯೊಬ್ಬಳು ಮೇಲುಸಿರಿಡುತ್ತ "ವಾರ್ತಾತರಂಗ" ದ ಸಂಪಾದಕರ ಬಳಿ ಬಂದು ನಾಲ್ಕಾಣೆ ಕೊಟ್ಟಳು ಸಂಪಾದಕನು ಮುಖಮುಖ ನೋಡಿದ.

"ನಾಲ್ಕಾಣೆ!" ಎಂದು ತಿರಸ್ಕಾರಮಿಳಿತವಾದ ಮಾತು ಆತ ಬಾಯಿಂದ ಅನಿವಾರ್ಯವಾಗಿ ಹೊರಟಿತು.

"ಹೌದ್ರಪ್ಪ! ನಾನು ಬಡವಿ. ಎಲೆ ಹಚ್ಚಿ ಜೀವನ ನಡೆಸುತ್ತೇನೆ. ನಿಮ್ಮ ಪ್ರಕಟನೆ ಹಳ್ಳಿಯಲ್ಲಿ ಓದಿದರು. ಆ ಹೊತ್ತು ಒಂದು ವಾರ ಎಲೆ ಯಲ್ಲಿ ಬಂದದ್ದು ಈ ಫಂಡಿಗೆ ಅಂತ ಮಾಡಿದೆ.... ಕೈಲಾಗದು.... ನಾಲ್ಕಾಣೆ ಮಾತ್ರ.... ನಾಲ್ಕಾಣೆ ಆದರೂ ಪರವಾಗಿಲ್ಲ, ಆರು ಮೈಲಿ ನಡೆದರೂ ಪರವಾಗಿಲ್ಲ ಅಂತ.... ಏನೋ ಕಷ್ಟದಲ್ಲಿರುವವರಿಗೆ ಅಂತ.... ಮಿಕ್ಕವರ ಕಷ್ಟ ನಮ್ಮ ಕೈಲಾದ ಮಟ್ಟಿಗೂ ಕಡಿಮೆ ಮಾಡದಿದ್ದರೆ ನಾವು ಒದುಕಿ ಏನು ಸಾರ್ಥಕ ಅಂತ.... ಏನೋಪ್ಪ ಬಡವಿ.... ಬೇಡ ಅನ್ನಬೇಡಿ.... ಏನೋ ಹನಿ ಕೂಡಿದರೆ.... "

ಸಂಪಾದಕನ ಮುಖದ ಬಣ್ಣ ಬದಲಾಯಿಸಿತು. ನಮ್ರನಾಗಿ, ಗೌರವ ಪೂರ್ವಕವಾಗಿ "ನಿಮ್ಮ ಹೆಸರೇನಮ್ಮ?" ಎಂದು ಲೇಖನಿ ಕೈಗೆ ತೆಗೆದುಕೊಂಡ.

ಮುದುಕಿ "ಅಯ್ಯೋ! ನನ್ನ ಹೆಸರು ಯಾಕ್ರಪ್ಪ ನಿಮಗೆ! ನಾನೊಂದು ಬಡವಿ.... ಪಾಪ! ಕಷ್ಟದಲ್ಲಿರುವವರಿಗೆ ಅಂತ ಏನೋ ಕೈಲಾದದ್ದು.... ನನ್ನ ಹೆಸರು ಕಟ್ಟಿಕೊಂಡು ಏನಾಗಬೇಕು ಬಿಡಿ!...." ಎನ್ನುತ್ತ ಹೊರಟುಹೋದಳು.

# ಶ್ರಾದ್ಧ

ಹೋದ ವಾರ ನಮ್ಮ ತಾಯಿಯ ಶ್ರಾದ್ಧ ಬಂತು. ಮನೆಯಾಕೆ ಹುಷಾರಿರಲಿಲ್ಲವಾಗಿ ನಾನೇ ಅಡಿಗೆಗೆ ಸೇರಿದೆ. ಹನ್ನೆರಡು ಗಂಟೆಯ ವೇಳೆಗೆ ವಡೆ ಬೇಯಿಸುತ್ತಿದ್ದೆ. ಬ್ರಾಹ್ಮಣರು ಹಜಾರದಲ್ಲಿದ್ದರು. ಪಕ್ಕದ ಕಿರುಮನೆಯಲ್ಲಿ ಮಗು ಅಳುತ್ತಿತ್ತು. ಏಟು ಬಿದ್ದಂತಿತ್ತು.

ನನಗೂ ಒಲೆಯ ಮುಂದೆ ಕೂತು ಕೂತು ರೋಸಿಹೋಗಿತ್ತು. ಮತ್ತೆ ಗಂಡಸು ಹೆಂಗಸಿನ ಕೆಲಸ ಮಾಡಬೇಕೆಂದರೆ! ಸೆಟ್ಟನೆ ಎದ್ದು ಕೊಠಡಿಗೆ ಹೋಗಿ "ಲೇ! ಯಾಕೆ ಹೊಡೆಯುತ್ತಿ ಮಗೂನ?" ಎಂದೆ.

"ನೋಡಿ ಮತ್ತೆ! ತಿಂಡಿ ಬೇಕಂತೆ!"

"ಕೊಡಬಾರದೆ ಒಂದಷ್ಟು?"

"ಕೊಡಬಹುದು! ನೀವು ಬೇಯಿಸುತ್ತಿರುವ ವಡೆ ಬೇಕಂತೆ."

"ಅಷ್ಟೆ ತಾನೆ!" ಎಂದು ಅಡಿಗೆ ಮನೆಗೆ ಹೋದೆ. ಮಗು ಹಿಂದೆಯೆ ಅಳುತ್ತ ಬಂತು. ಅವಳೂ ಹಿಂದೆಯೆ ಬಂದಳು. ಮಗುವಿನ ಕೈಗೊಂದು ವಡೆ ಕೊಟ್ಟೆ. "ಅಯ್ಯೋ! ಇದೇನಿದು! ಭಾಗವತರಿಗೆ ಆಗುವುದಕ್ಕೆ ಮುಂಚೆ!" ಎಂದು ಗಾಬರಿಯಿಂದ ಮಗುವಿನ ಕೈಯಿಂದ ವಡೆ ಕಿತ್ತು ಕೊಂಡಳು. ಇನ್ನೊಂದು ಮಗುವಿನ ಕೈಲಿಟ್ಟೆ.

"ಅಯ್ಯೋ! ಇದೇನು ಅಂದರೆ!"

"ಲೇ! ಇಲ್ಲಿ ಕೇಳೆ! ಶ್ರಾದ್ಧ ಯಾಕೇ ಮಾಡೋದು? ಅಮ್ಮನಿಗೆ ತೃಪ್ತಿಯಾಗೋಕೆ! ಈ ಬೀದಿಯಲ್ಲಿ ಹೋಗುವ ಭಾಗವತರ ಚಕ್ಕಳದ ಬುಟ್ಟಿಗೆ ತಿಂಡಿ ತುಂಬಿದರೆ ಅವಳಿಗೆ ತೃಪ್ತಿಯಾಗುತ್ತದೊ ಅವಳ ಮೊಮ್ಮಗ ನಗುನಗುತ ಇದ್ದರೆ ತೃಪ್ತಿಯಾಗುತ್ತದೊ ಹೇಳು!"

"ನಿಮ್ಮ ದಮ್ಮಯ್ಯ! ಕೂಗಬೇಡಿ ಅಂದರೆ! ಭಾಗವತರು ಎಲ್ಲಾದರೂ ಎದ್ದು ಹೋದಾರು!"

"ಹೋದರೇನಂತೆ? ಹೊಟ್ಟೆ ಹಸಿದವರು ಎಷ್ಟೋ ಜನ ಇದ್ದಾರೆ....

ಲೇ! ಇಷ್ಟೆಲ್ಲ ಯಾಕೆ, ಅವರನ್ನೇ ಕೇಳೋಣ ಬಾ!'' ಎಂದು ಹಜಾರದ ಕಡೆ ಹೊರಟೆ.

ಬಾಗಿಲ ಹತ್ತಿರ ಬಂದೆ. ಭಾಗವತರೊಬ್ಬರು "ಅಯ್ಯೋ! ನಮಗೇಕೆ ಸ್ವಾಮಿ? ಈ ಕಾಲದ ಹುಡುಗರು....ಏನೂ ಮಾಡುವುದಕ್ಕೂ ಹೇಸುವುದಿಲ್ಲ!" ಎನ್ನುತ್ತಿದ್ದರು.

ಬಾಗಿಲು ದಾಟಿ ಬಂದು "ಸ್ವಾಮಿ! ನಮ್ಮ ಮಗು ಈ ದಿವಸಕ್ಕೆ ಮಾಡಿದ ವಡೆ ಕೇಳಿತು. ಭಾಗವತರಿಗೆ ಅರ್ಪಿಸುವ ಮೊದಲೆ ಕೊಟ್ಟುಬಿಟ್ಟೆ. ಇದರಲ್ಲಿ ದೋಷವುಂಟೊ?" ಎಂದೆ.

ಎರಡನೆಯ ಭಾಗವತರು—ಘಾಟಿ—ಇನ್ನಿಬ್ಬರ ಮುಖ ನೋಡಿ, "ಸ್ವಾಮಿ! ಮಗುವಿಗೆ ವಯಸ್ಸೆಷ್ಟು?" ಎಂದರು.

"ವಯಸ್ಸು—ಎರಡಾಗಿ ಎರಡು ತಿಂಗಳಾಯಿತು."

"ಇಷ್ಟೇನೆ! ಕೇಳಿಲ್ಲವೆ ಸ್ವಾಮಿ—ಐದು ವರುಷಕ್ಕೆ ಕೆಳಪಟ್ಟ ಮಕ್ಕಳಿಲ್ಲ ದೇವರ ಸಮಾನವೆಂದು! ದೇವರಾದ ಮೇಲಲ್ಲವೆ ಭಾಗವತರು...."

ಮೂರನೆಯವರು ನಡುವೆ ಬಾಯಿಕ್ಕಿ "ಸ್ವಾಮಿ! ಶ್ರದ್ಧೆಯಿಂದ ಮಾಡಿದುದೆಲ್ಲವೂ ಶ್ರಾದ್ಧವೆಂದು ವೇದಾದಿಗಳೇ ಘೋಷಿಸುತ್ತಿರುವಾಗ ...." ಎಂದು ಮೊದಲು ಮಾಡಿದರು.

ಮೊದಲ ಭಾಗವತರು ದರ್ಭೆಯಲ್ಲಿ ಪವಿತ್ರದುಂಗುರವನ್ನು ಮಡಿಸುತ್ತ "ಆಹಾ! ನಿಸ್ಸಂದೇಹ! ನಿಸ್ಸಂದೇಹ!" ಎಂದು ತಮ್ಮ ಸಮ್ಮತಿಯನ್ನು ಸೂಚಿಸಿದರು.

# ಅಯ್ಯೋ ಪಾಪ !

"....ಅಯ್ಯೋ ಮಾರೀ ! ಮಾರಿ ! ನಿನ್ನ ಮನೆ ಎಕ್ಕುಟ್ಟೋಗ ! ದುರ್ಗೀ ! ನಿನ್ನೆಸರು ನಿರ್ನಾಮವಾಗ ! ಮಾರೀ ! ನಾನೇ ನೆಡಿಸಿದೆನಲ್ಲೆ ನಿನ್ನ ಕಲ್ಲ ! ನನ್ನ ಮಗನ್ನ ತಿಂದುಕೊಂಡೆಯಲ್ಲೆ ! ಇದ್ದವನೊಬ್ಬನ್ನ ತಿಂದುಕೊಂಡೆಯಲ್ಲೆ ! ತಿಂಗಳುತಿಂಗಳಿಗೂ ಕೋಳಿ ಕುರಿ ಕೊಡುತ್ತಿರಲಿಲ್ಲವೆ ನಿನಗೆ ? ನಿನಗೆ ಏನು ಕಡಿಮೆಯಾಗಿತ್ತೆ ಮಾರೀ ! ಇದ್ದವನು ಒಬ್ಬನೆ ಒಬ್ಬ ಮಗನನ್ನ ತಿಂದುಕೊಂಡೆಯಲ್ಲೆ ಮಾರೀ ! ನಿನ್ನ ಕಲ್ಲು ಕಿತ್ತುಹಾಕಿಸದಿದ್ದರೆ ನನಗೆ ಬೇರೆ ಹೆಸರಿಡು ದುರ್ಗೀ !...."

ಇದ್ದ ಒಬ್ಬನೇ ಮಗನನ್ನು ಮಾರಿಯ ಉಪದ್ರವದಲ್ಲಿ ನೀಗಿಕೊಂಡು, ನಿಂಗವ್ವನು ಕುಲದೇವತೆಯಾದ ಮಾರಿಯನ್ನು ಬಯ್ಯುತೊಡಗಿದ್ದಳು. ಅವಳ ಬೈಗಳ ಮಳೆಯಲ್ಲಿ ನೆನೆದು ಅದ್ದಿ ಮುದ್ದೆಯಾಗಿದ್ದ ಮಾರಿಯ ರಕ್ಷಣೆಗೆ ಆ ಊರ ಪೂಜಾರಿ ಈಶ್ವರಯ್ಯನು ಬಂದ. ತ್ರಿಣೇಶ್ವರನ ಗುಡಿಗೆ ಹೋಗುವಾಗ ದಾರಿಯಲ್ಲಿ ನಿಂಗವ್ವನ ಅಬ್ಬರವನ್ನು ಕೇಳಿದನು.

ಕೇಳಿ ಬಂದು "ನಿಂಗಮ್ಮ ! ಇದೇನಿದು ? ನಿನಗೆ ವಯಸ್ಸಾಗಿದೆ. ನೀನೇ ಹೀಗಾಡಬಹುದೆ ? ಮಗನನ್ನು ಕೊಟ್ಟವಳು ಮಾರಿ. ಮಗನನ್ನು ಕೊಂಡವಳು ಮಾರಿ. ಅದಕ್ಕೆ ಹೀಗಾಡಬಹುದೆ ? ಇಷ್ಟು ದಿವಸವಾದರೂ ಆ ಮಗನನ್ನು ಕೊಟ್ಟಿದ್ದಳಲ್ಲ—ಅಷ್ಟಕ್ಕೆ ಸಂತೋಷಪಡು. ಈಗ ನೋಡು—ನನಗೂ ಮೂರು ಮಕ್ಕಳು ಕೈಗೆ ಬಂದು ಹೋದುವು. ನಾನು ದೇವರ ಮೇಲೆ ರೇಗಿದೆನೆ ? ಬೈದೆನೆ ? ಇಲ್ಲ ! ಎಲ್ಲ ನಮ್ಮ ಕರ್ಮ .... ಈಗ ಅವಳಿಗೆ ಮನೆಯಲ್ಲಿ ಗೆಡ್ಡೆ.... ನಮ್ಮ ರಂಗು, ನೂರೈವತ್ತು ರೂಪಾಯಿ ಸಂಬಳ ತರುತ್ತಿದ್ದವನು, ಇನ್ಫ್ಲುಯೆಂಜಾ ಬಂದು ಮಲಗಿದ್ದಾನೆ.... ನಾನು ದೇವರನ್ನು ಬೈಯುತ್ತೇನೆಯೆ ? ಇಂತಹ ಕಾಲದಲ್ಲಿ ಮನಸ್ಸಿಗೆ ಸಮಾಧಾನ ತಂದುಕೊಳ್ಳಬೇಕಮ್ಮ ! ದೇವರನ್ನು ಬೈದರೇನು ಬಂತು ? ........" ಎಂದು ಮೊದಲಾಗಿ ಹೇಳ ತೊಡಗಿದ.

ನಿಂಗವ್ವನಿಗೆ ಕೊಂಚ ಸಮಾಧಾನವಾಯಿತು. ಅಷ್ಟು ಹೊತ್ತಿಗೆ ಈಶ್ವರಯ್ಯನ ಆರುವರುಷದ ಮಗಳು ಏದುತ್ತ ಓಡಿಬಂದು "ಅಪ್ಪ! ಅಣ್ಣಯ್ಯ ಹೇಗೆ ಹೇಗೋ ಆಡುತ್ತಿದ್ದಾನೆ" ಎಂದು ಅಳುತ್ತ ಹೇಳಿದಳು. ಈಶ್ವರಯ್ಯನು ತನ್ನ ಮಾತಿನ ಪ್ರವಾಹವನ್ನು ಒಣಗಿಸಿ "ಅಯ್ಯೋ ದೇವರೆ! ಮೂರು ಮಕ್ಕಳು ಕೊಟ್ಟರೂ ನಿನಗಿನ್ನೂ ತೃಪ್ತಿಯಿಲ್ಲವೆ!" ಎಂದು ತಲೆಗೆ ಕೈಯೊತ್ತಿಕೊಂಡು, ಹುಚ್ಚನಂತೆ ಕೂಗುತ್ತ ಮನೆಯ ಕಡೆಗೆ ಓಡಿದ.

ನಿಂಗವ್ವನು ಈಶ್ವರಯ್ಯನನ್ನು ನೋಡುತ್ತ ಬೆಪ್ಪಾಗಿ ಕುಳಿತಳು. ಈಶ್ವರಯ್ಯನ ಮಾತಿನ ಪ್ರಯೋಜನ ಅವಳಿಗೆ ಅರ್ಥವಾಗಲಿಲ್ಲ.

# ಫಲಿತಾಂಶ

ಪರೀಕ್ಷೆಯ ಫಲಿತಾಂಶ ಬಂತು. ನಮ್ಮ ಮನೆಯ ಪಾರದ ಹುಡುಗ ವೆಂಕಟರಾಮು ಎಂ.ಎ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಪಾಸುಮಾಡಿದ. ಅವನನ್ನು ಕಂಡರೆ ನಮಗೆಲ್ಲ ಪ್ರೀತಿ. ಅವನಿಗೆ ಪಾಸಾಯಿತೆಂದು ನಮಗೆ ಹೆಮ್ಮೆ. ಅವನಿಗೆ ಕಾಗದ ಬರೆದೆ.

ಕಾಗದ ಬರೆದ ಮಾರನೆಯ ದಿನ ವೆಂಕಟರಾಮು ಮನೆಗೆ ಬಂದ.

"ಏನಯ್ಯಾ ಗಿಟ್ಟಿಸಿಬಿಟ್ಟೆ!" ಎಂದೆ.

ವೆಂಕಟರಾಮು ಅಳುತ್ತಿದ್ದ!

ನನಗೆ ಹೆದರಿಕೆ ಆಯ್ತು.

"ಮನೆಯಲ್ಲಿ ಎಲ್ಲ ಆರೋಗ್ಯ ತಾನೆ?" ಎಂದೆ.

"ಎಲ್ಲ ಚೆನ್ನಾಗಿದಾರೆ ಸಾರ್."

"ಮತ್ತೆ ಅಳೋದು?"

"ಪರೀಕ್ಷೆ ಸಾರ್....."

ನನಗೊಂದು ಯೋಚನೆ ಬಂದು ಮೈ ಝುಮ್ಮೆಂದಿತು. ಮೊದಲೇ ಬಡವರ ಹುಡುಗ! ನಮ್ಮ ವಿಶ್ವವಿದ್ಯಾಲಯದವರು "ಕಣ್ಣು ಕಾಣದೆ ನಿನಗೆ ಫಸ್ಟ್‌ಕ್ಲಾಸ್ ಎಂದೆವು. ನೀನು ಫೇಲು" ಎಂದು ಏನಾದರೂ ಹೊಸ ಪಟ್ಟಿ ಹಾಕಿರುವರೋ ಎನಿಸಿತು.

"ಏನಾದರೂ ಸೆಕಂಡ್‌ಲಿಸ್ಟ್.... ? ಫೇಲ್.... ?" ಎಂದೆ.

"ಇಲ್ಲ ಸಾರ್. ಫಸ್ಟ್ ಕ್ಲಾಸಿನಲ್ಲೆ...."

"ಮತ್ತೆ ?"

"ಫೇಲಾಗಿದ್ದಿದ್ದರೆ ಚೆನ್ನಾಗಿರುತ್ತಿತ್ತು ಸಾರ್. ಹಾಳು ಪಾಸು ಮಾಡಿಸಿದರು...."

"ಏನಯ್ಯಾ ಹೀಗೆನ್ನುವೆ! ವರುಷವೆಲ್ಲ ಕಷ್ಟಪಟ್ಟು...."

ವೆಂಕಟರಾಮು ಕಣ್ಣೀರನ್ನು ಅದುಮಿ ಹೇಳಿದ:

"ಅಲ್ಲ ಸಾರ್, ಈಗ ನೋಡಿ. ಇದುವರೆಗು ಓದುವ ಹುಡುಗ ಎಂದು ಅವರು ಇವರು ವಾರ ಕೊಡುತ್ತ ಇದ್ದರು. ಈಗ ಪಾಸಾಗಿ ಓದು ಮುಗಿಯಿತೆಂದ ಮೇಲೆ ಯಾರು ಸಾರ್ ವಾರ ಕೊಡುವವರು ? ಈ ಪಾಸು ಮಾಡಿಸಿದವರು ನಮಗೆ ಕೆಲಸಕೊಡುವ ಹಾಗಿಲ್ಲ....ಈ ಕಡೆ ವಾರ....ನಾವು ಬಡವರು....ಏನು ಮಾಡಬೇಕು ಸಾರ್ ?...."

ನಾನೇನು ಹೇಳುವುದು ?

# ನಮ್ಮ ಊರಿನ ನ್ಯಾಯ

ನಮ್ಮ ಊರು ಎಂದರೆ ನಮ್ಮ ಕಾಡು. ಅಲ್ಲಿ ಒಂದು ನರಿ. ಅದು ಒಂದು ದಿನ "ಸಿಂಹ ಕಾಡಿಗೆ ಮಹಾರಾಜನಂತೆ! ದಂಡಕ್ಕೆ! ಪ್ರಜೆಗಳನ್ನು ಸರಿಯಾಗಿ ನೋಡಿಕೊಳ್ಳಲು ಬರದು—ರಾಜನಂತೆ! ಇರಲಿ!" ಎಂದುಕೊಂಡು, ಕೈಲಿದ್ದ ಮೊಲದ ಅರ್ಧದೇಹವನ್ನು ಬಾಯಿಗೆ ತುರುಕಿಕೊಂಡು ನುಂಗುತ್ತ ನಡೆಯಿತು.

ನುಂಗಿ ನಡೆದು ಸಿಂಹದ ಬಳಿ ಬಂದು "ಮಹಾಪ್ರಭೂ! ತಮ್ಮ ಆಳ್ವಿಕೆಯಲ್ಲಿ ಅನ್ಯಾಯ ಎನ್ನುವುದು ಎಕ್ಕ ಹುಟ್ಟಿಹೋಗಿದೆ. ಆದರೂ ತಾವು ಬಡಮೃಗಗಳಾದ ಜಿಂಕೆಗಳನ್ನು ಆರೋಗಣೆಗೆ ಸ್ವೀಕರಿಸುವ ಬದುಲು ಬೇಟೆನಾಯಿಗಳನ್ನು ಏಕೆ ತಿನ್ನಬಾರದೆಂದು ಪಾದಸೇವಕನ ಸಲಹೆ" ಎಂದಿತು.

ಸಿಂಹವು ಕೇಳಿತು. ಗಂಭೀರವಾಗಿ "ನೀನು ಹೇಳುವುದರಲ್ಲಿ ಸ್ವಾರಸ್ಯವಿದೆ. ಬೇಟೆನಾಯಿಗಳನ್ನು ತಿನ್ನಬೇಕಷ್ಟೆ! ಆಗಬಹುದು" ಎಂದಿತು.

ನರಿಯ ಮುಖದಲ್ಲಿ ತೃಪ್ತಿ ತುಳುಕಿತು.

"ನೀನು ಬಂದ ಹಾಗೆಯೆ ಈಗತಾನೆ ಯಾರೋ ಬಂದಿದ್ದರು. ನಾನು ನರಿಯನ್ನು ಏಕೆ ತಿನ್ನಬಾರದೆಂದು ಸಲಹೆ ಕೊಟ್ಟರು" ಎಂದು ಸಿಂಹವು ಪುನಃ ಹೇಳಿತು.

"ನರಿಯನ್ನು ಏಕೆ ತಿನ್ನಬೇಕು ಮಹಾಸ್ವಾಮಿ?"

"ನಿನ್ನ ತುಟಿಗೆ ಅಂಟಿಕೊಂಡಿರುವುದೇನು?"

ನರಿಯು ಚಕಿತವಾಗದೆ ನಾಲಿಗೆಯಿಂದ ತುಟಿಯನ್ನು ನೆಕ್ಕಿಕೊಂಡು "ಮಹಾಸ್ವಾಮಿ! ಅಂತಹ ಸಲಹೆ ಕೊಟ್ಟವರು ಯಾರು?" ಎಂದಿತು.

ನರಿಯನ್ನು ತಿನ್ನುವ ಸಲಹೆ ಕೊಟ್ಟ ಮೊಲವೊಂದು ಸಿಂಹದ ಆಜ್ಞೆಯಂತೆ ಮುಂದೆ ಬಂದಿತು.

ಅದು ಬಂದುದು ತಡ, ನರಿಯು ಅದರ ಮೇಲೆ ಹಾರಿ ಹಿಡಿದು ಗಬಕ್ಕನೆ ನುಂಗಿ ಸಿಂಹದ ಕಡೆ ತಿರುಗಿತು.

ತಿರುಗಿ ಹೇಳಿತು :

"ಮಹಾಸ್ವಾಮಿ ! ಈ ಬೇಟೆನಾಯಿಗಳಿಂದ ನಮಗಿಲ್ಲಿ ಉಳಿಗಾಲವಿಲ್ಲವಾಗಿದೆ. ಮಹಾಪ್ರಭುಗಳು ಬಡಜಿಂಕೆಗಳನ್ನು ಆರೋಗಿಸುವ ಬದಲು....ಮಹಾಸ್ವಾಮಿಯುವರು........ "

# ಕ್ಷಮೆ

ಮೊನ್ನೆ ನಮ್ಮ ಬೆಂಗಳೂರು ರಂಗೈಯ್ಯಂಗಾರ್ಯರ ಮನೆಯ ವೈದಿಕಕ್ಕೆ ಪುರೋಹಿತರು ಸಿಕ್ಕಲಿಲ್ಲವಂತೆ. ಬೆಳಿಗ್ಗೆ ಐದು ಗಂಟೆ ವೇಳೆಗೆ ಮೈಸೂರಿನಲ್ಲಿರುವ ನನಗೆ ಐದು ರೂಪಾಯಿ ಟೆಲಿಗ್ರಾಂ ಮಣಿ ಆರ್ಡರ್ ಮಾಡಿ ತುರ್ತು ಬರಹೇಳಿದರು. ಪಾಪ ಬ್ರಾಹ್ಮಣ ಕರ್ಮಭ್ರಷ್ಟನಾಗ ಬಾರದು ಎಂದುಕೊಂಡು, ಬೆಳಿಗ್ಗೆ ಏಳು ಗಂಟೆಯ ರೈಲಿಗೆ ಟಿಕೀಟು ತೆಗೆದುಕೊಂಡು ಟಿಕೀಟು ಚಿಲ್ಲರೆಗಳನ್ನು ಸೊಂಟಕ್ಕೆ ಸಿಕ್ಕಿಸಿ ರೈಲು ಹತ್ತಿದೆ.

ರೈಲಿನಲ್ಲಿ ಹೆಚ್ಚು ಜನ ಇರಲಿಲ್ಲ. ದರ್ಭೆಯ ಕಂತೆಯನ್ನು ಕೆಳಗಿರಿಸಿ ಹಾಗೆಯೇ ತಲೆಕೊಟ್ಟೆ....ಪುನಃ ತಲೆ ಎತ್ತಿದಾಗ ಬೆಂಗಳೂರು ಬಂದಿತ್ತು!

ಟಿಕೀಟು ಕೊಡಬೇಕೆಂದು ಸೊಂಟಕ್ಕೆ ಕೈಹಾಕಿದರೆ—ಟಿಕೀಟೆ ಇಲ್ಲ! ಸೊಂಟ, ದರ್ಭೆಯ ಕಂತೆ, ಜುಟ್ಟು, ಪಂಚೆಯ ಅಂಚು ಇನ್ನೂ ಇರ ಬಹುದಾದ ಕಡೆಗಳನ್ನೆಲ್ಲ ಬೆದಕಿದೆ. ಟಿಕೀಟು ಸಿಗಲಿಲ್ಲ!

ಟಿಕೀಟು ಕೇಳುವವನು "ರೀ! ನೀವು ಟಿಕೀಟು ಇಲ್ಲದೆ ಬಂದಿದ್ದೀರಿ!" ಎಂದ.

"ಇಲ್ಲ ಮಹಾರಾಯ! ಇದೋ ಐದು ರೂಪಾಯಿನಲ್ಲಿ ಒಂದು ರೂಪಾಯಿ ಹನ್ನೆರಡಾಣೆ ಒಂಭತ್ತು ಕಾಸು ಜಾತಾ ಬಾಕಿ ಮೂರು ರೂಪಾಯಿ ಮೂರಾಣೆ ಮೂರು ಪೈ ಇದೆ ನೋಡು" ಎಂದು ಸೊಂಟ ದಿಂದ ಚಿಲ್ಲರೆ ತೆಗೆದು ಎಣಿಸಿ ಅಂಗೈನಲ್ಲಿಟ್ಟು ತೋರಿಸಿದೆ.

ಅವನು ಎರಡು ನಿಮಿಷ ನನ್ನನ್ನೇ ದುರುದುರನೆ ನೋಡುತ್ತ ಕೈಲಿದ್ದ ದುಡ್ಡನ್ನು ಕೆದಕಿ ಎಣಿಸಿ ಕಡೆಗೆ "ನೀವು ಸುಳ್ಳು ಹೇಳುವವರ ಹಾಗೆ ಕಾಣುವುದಿಲ್ಲ. ನೀವು ಹೋಗಬಹುದು" ಎಂದು ದುರ್ದಾನ ತೆಗೆದು ಕೊಂಡವನಂತೆ ಸರಿದುಹೋದನು.

ನನ್ನ ಆನಂದಕ್ಕೆ ಪಾರವಿಲ್ಲದೆ ಹೋಯಿತು. "ಸತ್ಯಮೇವಜಯತೇ

ನಾನೃತಂ " ಎಂಬ ಸನಾತನ ಸೂಕ್ತಿಯು ನೆನಪಾಯಿತು. ನನ್ನ ಬ್ರಹ್ಮ ವರ್ಚಸ್ಸಿಗೆ ಆತನು ಡಂಗಾಗಿರಬೇಕು ಎನ್ನಿಸಿತು. ಸಾಧುಗಳನ್ನು ಸತಾಯಿಸಿದವರಿಗೆ ಸ್ವರ್ಗ ಸಿಗುವುದಿಲ್ಲವೆಂಬುದು ಅವನಿಗೆ ಗೊತ್ತಿರಬೇಕು ಎನ್ನಿಸಿತು. ಅಂತೂ ಮೂರ್ತೀಭವಿಸಿದ ಆ ಕ್ಷಮೆಯನ್ನು ಕಣ್ಣು ಮರೆಯಾಗುವ ವರೆಗೂ ನೋಡುತ್ತ ನಿಂತೆ. " ಬ್ರಹ್ಮ ತೇಜೋ ಬಲಂ ಬಲಂ " ಎಂದು ಒಳಗೊಳಗೆಯೇ ಹಾಡಿಕೊಂಡೆ. ಮಧ್ಯಾಹ್ನ ದ್ವಾದಶ ಪುಂಡ್ರವನ್ನು ಎಂದಿಗಿಂತ ದಪ್ಪನಾಗಿ ಹಾಕಬೇಕೆಂದು ನಿರ್ಧರಿಸಿಕೊಂಡೆ.

ಕಡೆಗೆ ತೃಪ್ತಿಯ ಉಸಿರೆಳೆದು ಅಂಗೈಯಿನ ಚಿಲ್ಲರೆಯನ್ನು ಎಣಿಸಿ ನೋಟಕ್ಕೆ ಸಿಕ್ಕಿಸಹೋದರೆ—ಎರಡು ರೂಪಾಯಿ ಮೂರಾಣೆ ಮೂರು ಕಾಸು ಮಾತ್ರವೇ ಇದೆ! ಒಂದು ರೂಪಾಯಿನ ನಾಣ್ಯ.... ! ಘನ!

ಅದಕ್ಕೇನೆ ಮತ್ತೆ....

# ಸಿರಿಪುರದ ಸರಕಾರ

ಅತ್ತಿಯ ಹಣ್ಣು ಒಂದು ನೋಡಿದರೆ ಸಾಕು, ಎಲ್ಲವನ್ನೂ ಬಿಚ್ಚ ಬೇಕಾಗಿಲ್ಲ. ಹಾಗೆಯೇ ನಮ್ಮ ಸಿರಿಪುರದ ಸರಕಾರದ ಕಾಯಿದೆಗಳಲ್ಲಿ ಒಂದು ನೋಡಿದರೆ ಸಾಕು.

ಸಿರಿಪುರದ ಸರಕಾರದ ಕಾಯಿದೆ ನಾಲ್ವತ್ತೇಳರ ಪ್ರಕಾರ ಸಿರಿಪುರದಲ್ಲಿ ಮದುವೆಯಾಗಬೇಕಾದರೆ ಹೆಣ್ಣು ಗಂಡು ಇಬ್ಬರೂ ಸರಕಾರಕ್ಕೆ ಅರ್ಜಿ ಹಾಕಬೇಕು. ಆ ಅರ್ಜಿಗೆ ಅಪ್ಪಣೆ ಸಿಗುವ ವರೆಗೂ ಅವರು ಮದುವೆ ಯಾಗಕೂಡದು. ಈ ಕಾಯಿದೆಗೆ ಮೀರಿ ನಡೆದರೆ ತಲೆದಂಡ.

ಈ ಕಾಯಿದೆ ಜಾರಿಯಲ್ಲಿ ಇರುವಾಗ ರಂಗಪ್ಪ ಗಂಗಮ್ಮ ಎಂಬುವ ರಿಬ್ಬರು ಮದುವೆಯಾಗಬೇಕೆಂದು ಅರ್ಜಿಹಾಕಿದರು. ಆಗ ರಂಗನಿಗೆ ವಯಸ್ಸು ಇಪ್ಪತ್ತು, ಗಂಗೆಗೆ ಹತ್ತು.

ಅವರು ಅರ್ಜಿಹಾಕಿದರು. ಕಾಯ್ದರು. ದಿನವಾಯ್ತು, ತಿಂಗ ಳಾಯ್ತು, ವರುಷವಾಯ್ತು. ವರುಷವಾಯ್ತು, ವರುಷಗಳಾದುವು........

ಹೀಗೆಯೆ ಇರಲು ಒಂದು ದಿನ "ಸರಕಾರದ ಕಾಯಿದೆ ನಾಲ್ವತ್ತೇಳು ಇಲ್ಲದಿದ್ದದ್ದರೆ ಈ ದಿವಸ ಷಷ್ಠಪೂರ್ತಿಶಾಂತಿ ಮಾಡಿಕೊಳ್ಳಬಹು ದಾಗಿತ್ತು" ಎಂದು ರಂಗನು ಯಾರ ಹತ್ತಿರಲೋ ಹೇಳಿದ.

ಆ ಹೊತ್ತೇ ಗಂಗಮ್ಮನು "ಈ ದಿವಸ ಋಷಿಪಂಚಮಿ ಆಚರಿಸ ಬಹುದಾಗಿತ್ತು—ಈ ಸುಡುಗಾಡು ನಾಲ್ವತ್ತೇಳನೆಯ ಕಾಯಿದೆ ಇಲ್ಲದೆ ಹೋಗಿದ್ದರೆ!" ಎಂದು ಬೇರೆಯವರ ಹತ್ತಿರ ಎಂದಳು.

ಅದೇ ದಿನ ಮಧ್ಯಾಹ್ನ ಅವರಿಬ್ಬರ ಅರ್ಜಿಗೆ ಸರಕಾರದಿಂದ ಅಪ್ಪಣೆ ಬಂತು—ಮದುವೆಯಾಗಬಹುದೆಂದು!

ಮೊದಲೇ ಹೇಳಿದ ಹಾಗೆ—ಅತ್ತಿಯ ಹಣ್ಣು ಒಂದು ನೋಡಿದರೆಷ್ಟೋ ಹತ್ತು ನೋಡಿದರೂ ಅಷ್ಟೇ!

# ಗೋರ್ಕಲ್ಲು

ಸಿರಿಪುರದ ಮಾಯಾಸುಖಿಯು ಪ್ರಜಾದ್ರೋಹದ ಅಪರಾವತಾರನಾಗಿದ್ದ. ಅವನ ಭಾವನೆಯು ತನ್ನ ಸುಖವೇ ಪ್ರಜೆಗಳ ಸುಖವೆಂದು. ಪ್ರಜೆಗಳಿಗೆ ಹೊಟ್ಟೆಬಟ್ಟೆಗಳಿಗಿಲ್ಲದಿದ್ದರೂ ಮಾಯಾಸುಖಿಯ ಮೋಜು ಹೇಳತೀರದು. ಸಿರಿಪುರದ ಜನಸಂಖ್ಯೆ ಹೆಚ್ಚುಕಡಿಮೆ ಒಂದು ಲಕ್ಷ; ಮಾಯಾಸುಖಿಯ ಮಹಲಿರುವುದು ಸಿರಿಪುರದ ಏಳಾಣೆಯ ಭಾಗದಲ್ಲಿ. ಪ್ರಜೆಗಳು ದರಿದ್ರದೇವತೆಯ ಉಪಾಸಕರಾಗಿ ಅವಳ ಅನುಗೃಹೀತ ಭಕ್ತರಾಗಿದ್ದರೂ ಧೊರೆಯು ಜ್ಞಾನಾರ್ಜನೆ, ಆತ್ಮೋನ್ನತಿ, ಮೋಕ್ಷಸಂಪಾದನೆ ಮುಂತಾದವುಗಳ ಸೋಗಿನ ಆಮೋದವಿನೋದಗಳಿಗೆ ಸಾಧಕಗಳಾದ ಪ್ರವಾಸಗಳಿಗಂತೂ ಹೊತ್ತು ಗೊತ್ತಿರಲಿಲ್ಲ. ಸಿರಿಪುರದವರ ಬಾಳು "ನಾ ವಿಷ್ಣುಃ ಪೃಥಿವೀಪತಿಃ" ಎಂಬುದರಲ್ಲಿ ನೆಟ್ಟು ಬೇರೂರಿ ಬೆಳೆದ ಭೂಜ. ಹಸುತನದಲ್ಲಿ ಸಿರಿಪುರದವರು ಎತ್ತಿದ ಕೈ. ಸಿರಿಪುರದರಸನ ಸಚಿವ ಸಂಘವನ್ನು ನೋಡಿದರೆ ಅರಸನನ್ನು ಮಡಿಕೆ ಕನ್ನಡಿಗಳಲ್ಲಿ ಕಂಡಂತಿತ್ತು—ಎಲ್ಲ ಭಾಗಗಳಲ್ಲಿಯೂ.

ಇದನ್ನೆಲ್ಲ ಅರಿತು ಜನರಿಗಾಗಿ ಮರುಗಿ ಸುಜ್ಞಾನಸಾಗರನೆಂಬುವನು ಧೊರೆಯ ಅತಿಥಿಯಾಗಿ ಬಂದನು. ಬರುವಾಗಲೆ ಊರ ಹೊರಗಿನ ಕಲ್ಲು ಕಂಭವನ್ನು ಕಂಡು "ಈ ಮನುಷ್ಯ ಎಷ್ಟು ಸಾಧುವಾಗಿದ್ದಾನೆ. ಇವನಿಂದ ಇದುವರೆಗೆ ಯಾರಿಗೂ ತೊಂದರೆಯಾಗಿಲ್ಲವೊ?" ಎಂದ.

ಧೊರೆಯು ಅವನ ಮುಖಮುಖ ನೋಡಿ "ಇದೇನು ಸ್ವಾಮಿ! ಕಲ್ಲು ಕಂಭವನ್ನು ಮನುಷ್ಯನೆನ್ನುತ್ತೀರಿ!" ಎಂದ.

ಸುಜ್ಞಾನಸಾಗರನು ಆ ಮಾತಿಗೆ ಕಿವಿಕೊಡದೆ ಪಕ್ಕದಲ್ಲಿದ್ದ ತೋಟದ ಫಲಪುಷ್ಪಭರಿತಗಳಾದ ಮರಗಿಡಗಳನ್ನು ನಿರ್ದೇಶಿಸಿ "ಇವರೆಲ್ಲರೂ ಯಾರು? ಬಹಳ ಆನಂದದಿಂದ ಇರುವ ಹಾಗಿದೆ. ಬಹಳ ಉದಾರಿಗಳಾಗಿರುವರಲ್ಲ ಇವರು!" ಎಂದು ಆಶ್ಚರ್ಯದಿಂದ ತಲೆದೂಗಿದನು.

" ಇದೇನು ' ಇವರು ' ಎನ್ನುತ್ತೀರಿ ! ಇವೆಲ್ಲ ಮರಗಿಡಗಳು. ಇದು ತೋಟ" ಎಂದು ಕಕ್ಕುಬೆಕ್ಕಾಗಿ ಧೊರೆಯು ಕೈ ತೋರಿಸಿದ.

ಸುಜ್ಞಾನಸಾಗರನು ಅದನ್ನು ಕೇಳಿಯೂ ಕೇಳದಂತೆ ಅರಸನ ಪರಿವಾರವನ್ನು ತೋರಿಸಿ " ಇಲ್ಲಿ ಉದ್ದುದ್ದವಾಗಿ ನಿಂತಿವೆಯಲ್ಲ—ಇದೇನು ಇವೆಲ್ಲ ? ಇವಕ್ಕೇಕೆ ಬಟ್ಟೆಬರೆಗಳು ?" ಎಂದು ಕೇಳಿದನು.

ಧೊರೆಯು ಕಣ್ಣುಕಣ್ಣು ಬಿಟ್ಟು " ಸ್ವಾಮಿ ! ಇವರು ನಮ್ಮ ಸಂಸ್ಥಾನದ ಸಚಿವಶ್ರೇಷ್ಠರು. ಇವರು ' ಇವು ' ಅಲ್ಲ. ಮನುಷ್ಯರು !" ಎಂದನು.

" ಮನುಷ್ಯರೆ ? ನಿಜವಾಗಿ !"

ಧೊರೆಯು ಪ್ರತಿಯೊಬ್ಬನ ವಂಶವೃಕ್ಷವನ್ನೂ ವಿವರಿಸತೊಡಗಿದನು.

*   *   *   *   *

ಉಗುರು ಮೊನೆ ನೋಡಿ ಮನುಷ್ಯನ ಮೈ ಅರ್ಥಮಾಡಿಕೊಳ್ಳಬೇಕಾದರೂ—ಬೇಕು !

# ? ? ?

ಅಮಾವಾಸ್ಯೆಯ ರಾತ್ರಿಯಲ್ಲಿ ಕಂದಿ ಸೊರಗಿದ್ದ ಆಕಾಶವನ್ನು ಹುಣ್ಣಿಮೆಯ ಚಂದ್ರನು ತಬ್ಬಿ ನುಡಿದ ಲಲ್ಲೆವಾತಿನಂತಿತ್ತು ; ಒಣಗಿ ಬೆಂಡಾಗಿ ಬಾಳ ಸೀಗಿದ ಮರವು ತಾನು ಮರಳಿ ಚಿಗಿತುದಕ್ಕೆ ಹಿಗ್ಗಿ ಹಾಡಿದ ಗಾನದಂತಿತ್ತು ; ಬೀದಿಯ ಬಾಗಿಲ ಹೊಸಲ ಹೊರಗಿನಿಂದ ಕೇಳಿ ಬರುತ್ತಿದ್ದ ಹಾಡು ನಾರದನ ಮಹತಿಯೂ ಶಾರದೆಯ ಬೃಹತಿಯೂ ಮೇಳಿಸಿ ನುಡಿದಂತಿತ್ತು. ಎಂದರೆ ಒಟ್ಟಿನಲ್ಲಿ ಅದು ನುಡಿಗೆ ಸಿಲುಕದಿತ್ತು.

ಇಂತಹ ಕೊರಲ ಸಂಪತ್ತಿನವಳು ಯಾರು ?....ಭಿಕ್ಷುಕಿಯೆ ?.... ಭಿಕ್ಷುಕಿ !....ಓ !....

ಬೀದಿಯ ಬಾಗಿಲ ಹೊಸಲ ಹೊರಗಿನ ಹಾಡು ಒಮ್ಮೆಯೇ ನಿಂತು ಹೋಯಿತು. ಹಗಲೆಲ್ಲಾ ಬಂಡುಂಡ ದುಂಬಿಯು ಸಂಜೆ ಮನೆಯ ಕಡೆ ಹಾರುತ್ತ ಇದ್ದಕ್ಕಿದ್ದಂತೆ ರೆಕ್ಕೆ ಮುರಿದು ಪುಡಿಯಲ್ಲಿ ಬಿದ್ದಂತಾಯಿತು.

ಭಿಕ್ಷುಕಿಯ ಹಾಡನ್ನು ಇನ್ನೂ ಕೇಳೋಣವೆನಿಸಿತ್ತು. ಅದು ನಲುವು ಅವಳನ್ನು ಕರೆದು ಕೂಡಿಸಿ ಹಾಡಿಸೋಣವೆಂದು ಎದ್ದು ಹೊಸಲು ದಾಟಿದೆ.

ಯಾರಿವಳು ?....ಇವಳೆಯೆ ಹಾಡಿದವಳು !....ಅಷ್ಟು ಚೆನ್ನಾಗಿ !.... ಇಲ್ಲ ! ಇಲ್ಲ ! ಇವಳಿರಳು !....ಈ ಕಲ್ಲುಮುಳ್ಳು ಹೊಡೆದ ಮುಸುಡಿ....ಈ ಗೂನು....ಈ ಕಜ್ಜಿ ಹತ್ತಿದ ಮೈ....ನಾವು ಓದಿರುವ ಕೇಳಿರುವ ವಿಕಾರ ರೂಪಗಳೆಲ್ಲ ಬೆರೆತ ಹಾಗಿರುವ ಈ ಅಪಸ್ಮಾರ !....ಇಲ್ಲ ! ಇಲ್ಲ ! ಇಲ್ಲ ! ಇವಳಲ್ಲವೇ ಅಲ್ಲ ಹಾಡಿದವಳು !....ಆದರೂ....

" ಯಾರೇ ಹಾಡಿದವರು ಇಲ್ಲಿ ? "

" ನಾನೇ—ನನ್ನೊಡೆಯಾ."

ಉದಯಾಸ್ತಮಾನಗಳ ಚೆಲುವು ಮುಖಗಳಿಗೆ ಕತ್ತಲ ಸೆಗಣಿನೀರು ಚೆಲ್ಲಿದಂತಾಯ್ತು ! ಮರುಮಾತಾಡದೆ ಮುಖಬಿಳಿಸಿ ಹಿಂದಿರುಗಿ ಹೊಸಲು ದಾಟಿಹೋದೆ.

# ಬ್ರಹ್ಮಸಾಕ್ಷಾತ್ಕಾರ

ಸರ್ವಮಂಗಳೆಯನ್ನು ನೋಡಿದರೆ ನಮ್ಮ ಕಲ್ಪನೆಯ ಆದರ್ಶ ಸ್ತ್ರೀಮೂರ್ತಿಯು ಆವಿರ್ಭವಿಸಿ ಜೀವಕಳೆವೆತ್ತು ಬಂದಂತಿತ್ತು ; "ಸ್ತ್ರೀ ರೂಪಮೆ ರೂಪಂ" ಎಂದು ಶಬ್ದಶಿಲ್ಪವನ್ನೆತ್ತುವಾಗ ಕವಿಕುಂಜರನು ಯಾವ ಮೂರ್ತಿಯನ್ನು ಧ್ಯಾನಿಸಿದ್ದನೋ ಆ ಮೂರ್ತಿಯು ಮೈದೋರಿದಂತಿತ್ತು.

ಸರ್ವಮಂಗಳೆ ಎಂಬುದು ಅವಳಿಗೆ ನಾನು ಇಟ್ಟ ಹೆಸರು. ಅವಳ ನಿಜವಾದ ಹೆಸರು ನನಗೆ ಗೊತ್ತಿಲ್ಲ. ಅವಳ ಕುಲಗೋತ್ರಗಳೊಂದೂ ತಿಳಿಯದು. ತಿಳಿಯಬೇಕೆಂಬ ಕುತೂಹಲವೂ ಇಲ್ಲ.

ಈಗ ಮೂರು ವರುಷಗಳ ಕೆಳಗೆ ಪ್ರಾಣದೇವರ ದರ್ಶನಕ್ಕೆ ಹೋದ ಒಂದು ಶನಿವಾರ ಅವಳನ್ನು ಕಂಡೆ. ಆಗ ಅವಳಿಗೆ ಹದಿನೈದು ಹದಿನಾರು ಇರಬಹುದು ವಯಸ್ಸು. ಅಂದು ಅವಳನ್ನು ಕಂಡು ಮುಂದಿನ ಶನಿವಾರವೂ ಹೋದೆ. ಮತ್ತೆಯೂ ಕಂಡೆ. ಅಂದಿನಿಂದ ಪ್ರತಿ ಶನಿವಾರವೂ ಆ ದೇಗುಲಕ್ಕೆ ಹೋಗುವ ಅಭ್ಯಾಸವಿಟ್ಟಿದ್ದೇನೆ. ದೇವರ ದರ್ಶನವು ಬರಿಯ ನೋಗು. ಆದರೆ ಅವಳ ಸಂಬಂಧವಾಗಿ ನನಗೆ ಹೀನ ಭಾವನೆಗಳಿರಲಿಲ್ಲ, ಈಗಲೂ ಇಲ್ಲ. ಅವಳನ್ನು ಕಂಡರೆ ನನ್ನ ಸೋದರಿಯನ್ನು ಕಂಡಂತಾಗುತ್ತಿತ್ತು. ಆದರೂ ಅವಳನ್ನು ಸೋದರಿಯೆಂದು ಎಣಿಸಲಾಗುತ್ತಿರಲಿಲ್ಲ. ಅವಳನ್ನು ನೋಡಲು ನಾನೇಕೆ ಹೋಗುವೆನೆಂದು ವಿಮರ್ಶೆಮಾಡತೊಡಗಿದರೆ ಆ "ಏಕೆ" ಎಂಬುದು ಹಿಡಿತಕ್ಕೆ ಸಿಕ್ಕುವಂತಿರಲಿಲ್ಲ. ಸರ್ವಮಂಗಳೆಯು ಪ್ರತಿ ಶನಿವಾರ ಸಂಜೆ ಆರಕ್ಕೆ ಬಂದು, ಪೂರ ಅರ್ಧಗಂಟೆ ದೇವರ ದರ್ಶನದಲ್ಲಿ ಕಳೆಯುತ್ತಿದ್ದಳು. ಅವಳ ದರ್ಶನದಲ್ಲಿ ನಾನು ಕಾಲ ತಳ್ಳುತ್ತಿದ್ದೆ. ಹೀಗೆ ಮೂರು ವರುಷಗಳಿಂದ ನಡೆದು ಬರುತ್ತಿದೆ....

ಈಗ ವಾರ ಹಿಂದಿನ ಶನಿವಾರ ನನ್ನ ಸ್ನೇಹಿತ ಕಿಟ್ಟು ಕೆಲವು ವರ್ಣಶಿಲ್ಪಗಳನ್ನೆತ್ತಲು ಬೆಂಗಳೂರಿನಿಂದ ಮೈಸೂರಿಗೆ ಬಂದ. ಬಂದವನು

ನನ್ನೊಡನೆ ದೇವಾಲಯಕ್ಕೂ ಬಂದ. ದೇವರ ದರ್ಶನಕ್ಕೆ ಮೊದಲು ಸರ್ವಮಂಗಳೆಯ ದರ್ಶನವಾಯ್ತು.

"ಲೊ!'' ಎಂದವನೆ, ಕಿಟ್ಟು ಅವಳನ್ನೇ ನೋಡುತ್ತ ತಲ್ಲೀನನಾಗಿ ನಿಂತ.

"ಹಾಗೆಲ್ಲ ನೋಡಬಾರದು ಬಾರೊ ! " ಎಂದೆ.

"ಚ್ ! ತಾಳೋಮಾ !''

ಅವಳು ಮರೆಯಾಗುವ ವರೆಗು ಕಿಟ್ಟಿ ಅವಳ ಮುಖದಿಂದ ಕಣ್ಣು ಕದಲಿಸಲಿಲ್ಲ....

ಕಿಟ್ಟು ಅವಳನ್ನು ಕಂಡುದು ಶನಿವಾರ. ಆದಿತ್ಯ, ಸೋಮ, ಮಂಗಳ ವಾರಗಳು ಅವನು ಊಟಕ್ಕೇ ಬರಲಿಲ್ಲ. ಕೊಠಡಿ ಬಾಗಿಲನ್ನಿಕ್ಕಿ ಕೂಗಿದರೆ "ತಾಳೋಮಾ !'' ಎಂದು ಸಿಡುಕುವನು. ನನಗೆ ಕೊಂಚ ಗಾಬರಿಯಾಯಿತು. ಬೆಂಗಳೂರಿಂದ ಬಂದು ಇಲ್ಲಿ ಗುಟಕ್ಕೆಂದರೆ....?

ಬುಧವಾರ ಬೆಳಿಗ್ಗೆ ಕಿಟ್ಟಿ ಹೊರಗೆ ಬಂದ. ಬಹಳ ಇಳಿದು ಹೋಗಿದ್ದ.

"ಏನೊ ! ಅವಳನ್ನು ನೋಡಿ....'' ಎಂದೆ.

"ಇಲ್ಲಾಮಾ ! ಅಂಥದ್ದೇನೂ ಇಲ್ಲಾ.''

"ಮತ್ತೆ? ಮೂರು ದಿನದಿಂದ ಪಿಂಡಪ್ರದಾನ ಇಲ್ಲ....ಗುಬ್ಬಚ್ಚಿ ಹಾಗೆ ಗೂಡಿನಲ್ಲಿ ಅಡಗಿದ್ದೆ !''

"ಅದೇನಿಲ್ಲಾಮಾ ! ಇಲ್ಲಿ ಬಾ !" ಎಂದವನು ರೂಮಿಗೆ ಕರೆದು ಕೊಂಡು ಹೋಗಿ ಒಂದು ಪಟ ತೋರಿಸಿದ. ಪ್ರತ್ಯಕ್ಷ ಸರ್ವಮಂಗಳೆ! ವರ್ಣಶಿಲ್ಪದ ತುಟ್ಟತುದಿ ಮುಟ್ಟಿತ್ತು ಆ ಚಿತ್ರ !

ಕಡೆಗೆ ಮಾತು ಹುಡುಕಿ " ಏನೊ ಇದು ! " ಎಂದೆ.

"ಬ್ರಹ್ಮಸಾಕ್ಷಾತ್ಕಾರಾಮಾ !'' ಎಂದ ಕಿಟ್ಟಿ.

# ಅವ್ಯಕ್ತ

ಬೆಳಿಗ್ಗೆ ಇನ್ನೂ ಏಳುವುದಕ್ಕಿಲ್ಲ, ಹಾಸಿಗೆಯಲ್ಲಿ ಮಲಗಿದ್ದ ಹಾಗೆಯೆ ಶೇಷಗಿರಿಯ ಕೂದಲಿನ ಮೇಲೆ ಹಲ್ಲಿ ಬಿತ್ತು.... ಎದ್ದು ಹೊಸಿಲ ದಾಟು ವಾಗ ಬಾಗಿಲಕಟ್ಟಿಗೆ ತಲೆ ಬಡಿದುಕೊಂಡ.... ಅವನ ಮನೆ ಮುಂದೆ ನಾಯಿ ಮುಗಿಲ ಕಡೆ ಮೋರೆ ಮಾಡಿ ಅಪಸ್ವರ ಎತ್ತಿತ್ತು.... ಎಲ್ಲಕ್ಕೂ ತುದಿಯಾಗಿ ಅವನ ಹೆಂಡತಿ ಸರೋಜಳು ತುಲಸಿ ಪೂಜೆಮಾಡುತ್ತ ಎಡವಿ ಅರಸಿನ ಕುಂಕುಮದ ತಟ್ಟೆ ಕೆಡವಿದಳು....

ಇದೆಲ್ಲ ಕಂಡು ಸರೋಜಳಿಗೆ ತುಂಬ ಹೆದರಿಕೆಯಾಯಿತು. ಆ ದಿನವೇ ಶೇಷಗಿರಿ ಸರ್ಕೀಟು ಹೊರಡಬೇಕಿತ್ತು. ಆ ದಿನವೇ ಹೀಗೆಲ್ಲ ಆಗಬೇಕಾ ದರೆ! ದೇವರಿಗೆ ತುಪ್ಪದ ದೀಪ ಹತ್ತಿಸಿ, ಹರಕೆ ಕಟ್ಟಿ ಶೇಷಗಿರಿಯನ್ನು ಹೊರಡಬೇಡವೆಂದು ಎಷ್ಟೋ ವಿಧಗಳಲ್ಲಿ ಬೇಡಿಕೊಂಡಳು. ಅವನಿಗೆ ಶಕುನಗಳಲ್ಲಿ ನಂಬಿಕೆಯಿರಲಿಲ್ಲ. ಅಲ್ಲದೆ ಅವನು ಸರ್ಕಾರಿ ನೌಕರ! ತನ್ನ ಗುಲಾಮಗಿರಿಯ ಕಷ್ಟಗಳನ್ನೆಲ್ಲ ಅವಳಿಗೆ ಹೇಳಿಕೊಂಡ.

ಆಗ ಯಾವುದೋ ಒಂದು ದನಿ ಅವನಿಗೆ ಮಾತ್ರ ಕೇಳಿಸಿತು. "ನಿನ್ನ ಕೆಲಸ ಹೆಚ್ಚೋ? ನಿನ್ನ ಜೀವ ಹೆಚ್ಚೋ? ಈ ದಿನ ನೀನು ಹೊರಟರೆ ಸಾವು ಸಿದ್ಧ ನಿನಗೆ!"

ಶೇಷಗಿರಿ ಕೊಂಚ ಅಳುಕಿದ. ಒಡನೆಯೆ "ಏನು! ಈ ಅರ್ಥವಿಲ್ಲದ ಗೊಡ್ಡು ಶಕುನಗಳನ್ನು ನಂಬಲು ನಾನೇನು ಅಜ್ಜಿಯೆ!" ಎಂದು ಕೊಂಡ.

ಅಂತೂ ಅದೇ ಮಧ್ಯಾಹ್ನ ರೈಲಿನಲ್ಲಿ ಊರುಬಿಟ್ಟು ಹೊರಟ.

* * * * *

ರೈಲು ಸಾಗಿತು. ನಾಲ್ಕು ಮೈಲು ದೂರ ಹೋಗುವುದರೊಳಗಾಗಿ ಇದಿರಿಗೆ ಬರುತ್ತಿದ್ದ ಇನ್ನೊಂದು ರೈಲಿಗೆ ಢಿಕ್ಕಿ ಹೊಡೆದು ಕೆಳಗುರುಳಿತು. ಗಾಯಪಟ್ಟವರಲ್ಲಿ ಶೇಷಗಿರಿಯೂ ಒಬ್ಬ. ಮಗ್ಗುಲಾಗಿ ಮಲಗಿದ ಗಾಡಿ

ಯೊಂದರಡಿಯಲ್ಲಿ ಶೇಷಗಿರಿ ಸಿಕ್ಕಿಬಿದ್ದಿದ್ದ. ಅವನ ತಲೆ ಮಾತ್ರ ಈಚೆ ಇತ್ತು. ಮುಖದ ಮೇಲೆ ಮೃತ್ಯು ತಾಂಡವವಾಡುತ್ತಿತ್ತು.

ಆಗ ಶೇಷಗಿರಿಗೆ ಹಿಂದೆ ಕೇಳಿಸಿದ ದನಿ ಮತ್ತೆ ಕೇಳಿಸಿತು.

"ಈಗ ಏನೆನ್ನುವೆ?"

"ನೀನು ಹೇಳಿದುದು ವಾಸ್ತವ. ನನಗೆ ಈ ರೀತಿ ಎಚ್ಚರಿಸಿ, ಈಗ ಮರೆಯಲ್ಲಿ ನಿಂತು ಹಂಗಿಸುತ್ತಿರುವ ನೀನು ಯಾರು?"

ರೈಲುರುಳಿ ಆದ ಆ ಗೊಂದಲದಲ್ಲಿಯೂ ಶೇಷಗಿರಿಗೆ ಸ್ಪಷ್ಟವಾಗಿ ಕೇಳಿಸಿತು.

"ನಾನು ಅವ್ಯಕ್ತ! ನನ್ನನ್ನು ಇದುವರೆಗೆ ಯಾರೂ ಕಂಡುದಿಲ್ಲ. ಹಲವರು ನನ್ನನ್ನು ಹಲವು ಬಗೆಯಾಗಿ ಕರೆಯುವರು—ದೇವರೆಂದು, ಅದೃಷ್ಟವೆಂದು, ಹಣೆಯ ಬರೆಹವೆಂದು. ನಾನು ಪ್ರತಿ ಜೀವಿಯಲ್ಲಿಯೂ ಅಡಗಿರುವವನು, ಅದರ ಕೆಲಸ ನಡೆಸುವವನು. ನಿನ್ನಲ್ಲಿ ಇದ್ದು ನಿನಗೆ ಈ ಅಪಾಯವುಂಟೆಂದು ಎಚ್ಚರಿಸಿದವನೂ ನಾನೇ! ನಾನು ಜಗತ್ತಿನ ಆದಿಯಲ್ಲಿದ್ದವನು, ಅಂತ್ಯದಲ್ಲಿರುವವನು! ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನು ನಾನು! ತ್ರಿಕಾಲಜ್ಞಾನಿಯಾನು! ಅವ್ಯಕ್ತ ನಾನು! ಜಗದಾದಿ ಶಕ್ತಿಯಾನು! ಜಗದಾದಿ ದೈವವಾನು! ಜಗ........"

ಶೇಷಗಿರಿ ಸಾವಿನ ನೋವಿನಲ್ಲಿ ಆ ಅವ್ಯಕ್ತದ ಮಾತನ್ನು ಅಡ್ಡಗಟ್ಟಿ "ಸಾಕೋ ನಿನ್ನ ಹರಟೆ! ನೀನು ದೈವವಲ್ಲವೋ—ಜನರನ್ನು ಗೋಳ ಹುಯಿದು, ಅವರ ಸಂಕಟ ಕಂಡು ಹಿಗ್ಗುವ ದೆವ್ವ ನೀನು! ನೀನು ನನಗೆ ಎಚ್ಚರಕೊಟ್ಟುದು ನನ್ನ ಒಳ್ಳೆಯದಕ್ಕಿರಬಹುದು. ಆದರೆ ನೀನು ತ್ರಿಕಾಲ ಜ್ಞಾನಿಯಾಗಿರುವುದು ದಿಟವಾದರೆ—ನಿನ್ನ ಎಚ್ಚರಿಕೆಯನ್ನು ಮೂಲೆ ಗೊತ್ತಿ ನಾನು ಹೀಗೆ ಸಾಯಬೇಕೆಂಬುದನ್ನು ತಿಳಿದೂ ನೀನು ನನಗೆ ಎಚ್ಚರಕೊಟ್ಟುದೇಕೆ?....ಏಕೆ ಕೊಟ್ಟೆ?" ಎಂದು ಅರಿಚಿದ.

ಸಾವಿನ ಮನೆಯ ಹೊಸಲ ದಾಟುತ್ತಿದ್ದ ಶೇಷಗಿರಿಯ ಪ್ರಶ್ನೆಗೆ ಅವ್ಯಕ್ತದ ವಿಕಟಾಟ್ಟಹಾಸವೊಂದೇ ಉತ್ತರವಾಯಿತು!

# ಪರೀಕ್ಷೆ

"ಸರಿ! ಎತ್ತಿಬಿಟ್ಟಳು ತಿರುಗಿ ಸರಿಗಮ! ಹೀಗೆ ಹಗಲು ರಾತ್ರಿ ಎನ್ನದೆ ಹಾರ್ಮೋನಿಯಂ ಕುಟ್ಟುತ್ತಿದ್ದರೆ ಓದಿದ್ದೇನು ನನ್ನ ಬುರುಡೆಗೆ ಹತ್ತಬೇಕು!....ನಾನೇನು ಪರೀಕ್ಷೆ ಪಾಸುಮಾಡಬೇಕೊ, ಇಲ್ಲ ಮಣ್ಣು ಹುಯಿದುಕೊಳ್ಳಬೇಕೊ ಕಾಣೆ!....ಬೇಡ ಎಂದರೆ ಹುಡುಗಿ ಕೇಳುವ ಹಾಗಿಲ್ಲ. ಮನೆಯವರಿಗೂ ಬುದ್ಧಿ ಬಲ್ಲ. ಬೇಡ ಎನಬಾರದೆ! ಅಸಿಷ್ಟ! ಇನ್ನು ಮೂರು ತಿಂಗಳಿಗೆ ಪರೀಕ್ಷೆ ಬೇರೆ ಇದೆ........ಅಮ್ಮ!.... ಇದೇನಮ್ಮ ನನ್ನ ಓದಿಗೆ ಚಪ್ಪಡಿ!....ಅಮ್ಮ!...."

ಹೊರಗೆ ನನ್ನ ತಂಗಿ ಹಾರ್ಮೋನಿಯಂ ಕಲಿಯುತ್ತಿದ್ದಳು. ಆ ಗಲಾಟೆಯಲ್ಲಿ ಓದಿದುದು ತಲೆಗೆ ಹತ್ತುತ್ತಿರಲಿಲ್ಲ. ಅಮ್ಮ ನನ್ನು ಕೂಗಿದೆ; ಗಂಟಲು ಒಣಗಿಹೋಯಿತು. ಕೊನೆಗೆ ಬೇಜಾರಾಗಿ ಪುಸ್ತಕ ಹಿಡಿದು ಪಾರ್ಕಿಗೆ ಎದ್ದುಹೋದೆ. ಏನು ಪರೀಕ್ಷೆ ಎಂದರೆ ಬಿಟ್ಟಿಯೆ!

ಪಾರ್ಕಿಗೆ ಹೋಗುವಾಗ ಹಾಗೆಯೆ ಯೋಚಿಸಿದೆ. ಮಾಲತಿ ಹಾರ್ಮೋನಿಯಂ ಕಲಿಯುವುದು ತಪ್ಪಲ್ಲವೆಂದು ತೋರಿತು........ಅವರ ವರ ಪರೀಕ್ಷೆ ಅವರವರಿಗೆ! ನಾನೀಗ ಪರೀಕ್ಷೆಗೆ ಸರಿಯಾಗಿ ಕಲಿಯದಿದ್ದರೆ....ಪಾಸಾಗುವುದಿಲ್ಲ....ಚಿಂತೆಯಿಲ್ಲ, ಮರಳಿ ಕೂರಬಹುದು. ಆದರೆ ಮಾಲತಿ ಹಾರ್ಮೋನಿಯಂ ಕಲಿಯದಿದ್ದರೆ....? ಮುಂದೆ ಹೆಣ್ಣು ಪರೀಕ್ಷೆ ಮಾಡಲು ಬಂದವರು "ಹುಡುಗಿಗೆ ಹಾರ್ಮೋನಿಯಂ ಬರುತ್ತದೆಯೆ?" ಎಂದರೆ....! ಪರೀಕ್ಷೆಯಲ್ಲಿ ಮಾಲತಿ ಪಾಸಾಗುವ ಹಾಗಿಲ್ಲ....ಪುನಃ ಪುನಃ ಪರೀಕ್ಷೆಗೆ ಕೂರುವ ಹಾಗಿಲ್ಲ....ವಯಸ್ಸಾಗುತ್ತದೆ....ಆ ಮೇಲೆ....?

ಸರಿ! ಅವರವರ ಪರೀಕ್ಷೆಯ ಯೋಚನೆ ಅವರವರಿಗೆ!........

# ಪಾರ್ಥಸಾರಥಿ

ಅಜ್ಜಿ, ನನ್ನ ಹಂಡತಿ, ನಾದುನಿ ಇವರ ಎದುರಿಗೆ ನನ್ನ ವೀರ ಚರಿತೆಯನ್ನು ಹೇಳುತ್ತಿದ್ದೆ.

"....ಅವರು ಒಂದು ಗೋಲು ಹೊಡೆದಿದ್ದರು. ಕೊನೆಗೆ ಮುಗಿಯುವುದಕ್ಕೆ ಮೂರು ನಿಮಿಷ ಇರುವಾಗ ಆವೇಶ ಬಂದವನ ಹಾಗೆ ಮುಂದೆ ನುಗ್ಗಿ, ಒಂದರ ಮೇಲೊಂದು ಒಂದರ ಮೇಲೊಂದು ಮೂರು ಗೋಲು ಹಾಕಿದೆ. ಅಂದರೆ ನಾವೇ ಗೆದ್ದೆವು. ಎದುರು ಕಡೆಯವರಿಗೆ ಸೋತೆವೆಂದು ಹೊಟ್ಟೆಯುರಿ ಹತ್ತಿತು. ಆಟ ಮುಗಿದ ಮೇಲೆ ಜಗಳಕ್ಕೆ ಬಂದರು. ಸುತ್ತ ಜನ ಜಮಾಯಿಸಿತು. 'ಗೋಲು ಹೊಡೆದವನು ಇವನೆ ಕಣೊ!' ಎನ್ನುತ್ತ ಎದುರು ಕಡೆಯವನೊಬ್ಬನು ನನಗೊಂದು ಏಟು ಬಿಗಿದ. ನನಗೂ ರೇಗಿತು. ಅವನ ಸೊಂಟಕ್ಕೆ ಕೈಹಾಕಿ ಎತ್ತಿಕೊಂಡು ನಾವು ನೀರುಮನೆ ಒಲೆಗೆ ಸೌದೆ ತುರುಕುವ ಹಾಗೆ ಅವನನ್ನು ಆ ಜನರ ಕಾಲು ಸಂದಿಯಲ್ಲಿ ನುಗ್ಗಿಸಿದೆ. ಅಷ್ಟು ಹೊತ್ತಿ...."

ಆ ವೇಳೆಗೆ ಪಕ್ಕದಿಂದ ಒಂದು ಜಿರಲೆ ಹರಿದು ಬಂದಿತು. ಇನ್ನು ಈ ಅಧ್ವಾನ ಮೈಮೇಲೆ ಹತ್ತೀತೆಂದು ಕುಳಿತಿದ್ದವನು ಥಂಗನೆದ್ದು ದೂರ ನಿಂತೆ. ಅದನ್ನು ಕಂಡು ನನ್ನ ನಾದುನಿ—ಹತ್ತು ವರುಷ—ನಕ್ಕು ಹಾಸ್ಯ ಮಾಡುವಂತೆ "ಭಾವಾ! ನೀನು ಪಕ್ಕ ಪಾರ್ಥಸಾರಥಿ!" ಎಂದಳು. ನನಗೆ ಅರ್ಥವಾಗಲಿಲ್ಲ.

....ಯಾವ ಪಾರ್ಥಸಾರಥಿ ಇವನು? ....ನನಗೂ ಅವನಿಗೂ ಯಾವ ಸಾಮ್ಯ?....ಬಗೆ ಹರಿಯದೆ ಕಡೆಗೆ ಅವಳನ್ನೇ ಕೇಳಿದೆ. ಅವಳು "ಭಾವ! ನೀನು ಪಕ್ಕ ಪಾರ್ಥಸಾರಥಿ!" ಎಂದು ಮೇಲಿಂದ ಮೇಲೆ ಹೇಳುವಳಲ್ಲದೆ ಗುಟ್ಟು ಬಿಡಲಿಲ್ಲ.

ನನಗೆ ಆ ಹುಡುಗಿಯ ಮಾತಿನ ಅರ್ಥ ತಿಳಿಯಬೇಕೆಂದು ಕುತೂಹಲ ಕೆರಳಿತ್ತು. ಅದಕ್ಕಾಗಿ ಅವಳಿಗೆ ಗಿಲೀಟು ಮಾಡುತ್ತ ಪೆಪ್ಪರ

ಮೆಂಟು, ಬಿಸ್ಕತ್ತು ತಂದು ತಿನ್ನಿಸಿ, ರೂಪಾಯಿ ಹತ್ತಾಣೆ ಕತ್ತರಿಸಿ ಹೋದ ಮೇಲೆ ಹೇಳುತ್ತಾಳೆ:

"ಭಾವಾ! ಭಾರತ ಓದಿದ್ದೀಯ?"

"ಓದಿದ್ದೇನೆ."

"ಪಾರ್ಥಸಾರಥಿ ಯಾರು ಹೇಳು—ಭಾರತದಲ್ಲಿ?"

"ಕೃಷ್ಣ!"

"ಕೃಷ್ಣ ಅಲ್ಲ ಭಾವ! ವಿರಾಟಪರ್ವದಲ್ಲಿ ಅರ್ಜುನನ ಬಂಡಿ ಹೊಡೆದ ನೋಡು—ಆ ಪಾರ್ಥಸಾರಥಿ ನೀನು!" ಎಂದು ಹೇಳಿ ಹಾರಿದಳು.

"ಲಕ್ಷಣವಾಯ್ತು!" ಎಂದುಕೊಂಡೆ.

# ರಾಮೇಶ್ವರಕ್ಕೆ ಹೋದರೂ—

ಈ ಗಂಗಾಶಂಕರ ಗೌರೀಶಂಕರ ಎಂದು ಕೇಳುತ್ತೀವೆಯಲ್ಲ, ಅಸಾಧ್ಯದ ಬೆಟ್ಟಗಳೆಂದು—ನಮ್ಮ ಸಿರಿಪುರದ ಸಾರೀಶಂಕರ ಎಂಬುವುದನ್ನು ಕೇಳಿದರೆ ಗಂಗಾಶಂಕರ ಗೌರೀಶಂಕರಗಳು ಎಲ್ಲಾ ಸುರುಳಿ ಸುತ್ತಿಕೊಂಡು ಶೂನ್ಯವಾಗುತ್ತವೆ. ಪ್ರಪಂಚದಲ್ಲೆಲ್ಲ ಅತಿ ಸುಂದರವಾದ ನಾಡೆಂದರೆ ನಮ್ಮ ಸಿರಿಪುರ. ಹಾಗೆಯೆ ಪ್ರಪಂಚದ ಅತ್ಯುನ್ನತ ಪರ್ವತವೆಂದರೆ ನಮ್ಮ ಸಾರೀಶಂಕರ.

ಸಾರೀಶಂಕರದ ತುದಿ ಮುಟ್ಟಬೇಕಾದರೆ—ದೇವರೆ ಗತಿ! ಸಾರೀಶಂಕರದಲ್ಲಿ ಚಳಿ ಬಹಳ ಹೆಚ್ಚು. ಆ ಚಳಿಯಲ್ಲಿ ನೀರು ಕುಡಿದರೆ ಆ ಮೇಲೆ ಹಲ್ಲು ಕೊಡೆಯಬೇಕು! ಆ ಚಳಿಗೆ ಥಕ್ಕ ಮಸ್ಲಿನ್ನು ಬೆರೆತುಕೊಂಡು ಗೋಣಿಪಟ್ಟೆಯಾಗುತ್ತದೆ! ಸಿರಿಪುರದಿಂದ ಸಾರೀಶಂಕರಕ್ಕೆ ಹೋಗಬೇಕಾದರೆ ಆರು ಚಿಕ್ಕ ಬೆಟ್ಟಗಳನ್ನು ಹತ್ತಿ ಇಳಿದು, ಎರಡು ಹೊಳೆ ದಾಟಿ, ಐದು ಮೈಲು ಕಾಡು ಹಾಯಬೇಕು. ಇದಾದ ಮೇಲೆ ಸಾರೀಶಂಕರದ ಚಳಿ ನುಂಗಬೇಕು. ಸಾಲದುದಕ್ಕೆ ಸಾರೀಶಂಕರದ ಅನುಪಮದೌನ್ನತ್ಯವನ್ನು ಜೀರ್ಣಿಸಿಕೊಳ್ಳಬೇಕು. ಇಷ್ಟೆಲ್ಲ ಕಷ್ಟಪಟ್ಟು ತುದಿಮುಟ್ಟಿದರೆ ಅಲ್ಲಿ ಒಂದು ಬಂಡೆ ಸಿಗುತ್ತದೆ. ಆ ಬಂಡೆಗೆ ಅಡ್ಡಬಿದ್ದರೆ ಕೈವಲ್ಯ ಸಿಗುತ್ತದಂತೆ!

ಹೊರಗಿನವರು ಸಾರೀಶಂಕರಕ್ಕೆ ಹೋಗಬೇಕಾದರೆ ಮೊದಲು ಸಿರಿಪುರಕ್ಕೆ ಬಂದು ಹೋಗಬೇಕು. ಸಿರಿಪುರವು ಸುಂದರ ನಾಡಾದರೂ ಅದರ ಹೊರಮೇರೆಯಲ್ಲ ಜೌಗು ವಿಪರೀತ. ಕಾಲು ಇಟ್ಟಲ್ಲಿ ಹೂತುಕೊಳ್ಳುತ್ತದೆ. ಪರಿಶ್ರಮವಿರುವ ಮಾರ್ಗದರ್ಶಿಗಳ ಸಹಾಯದಿಂದ ಅದನ್ನು ಹಾಯ್ದು ಸಿರಿಪುರಕ್ಕೆ ಬರಬಹುದು. ಒಮ್ಮೆ ಸಿರಿಪುರಕ್ಕೆ ಬಂದು ಸಾರೀಶಂಕರಕ್ಕೆ ನಡೆದು ಸುಖವನ್ನನುಭವಿಸಿ ಮರಳಿದವರು ಜಪ್ಪಯ್ಯ ಎಂದರೂ ಪುನಃ ಬಾರರು.

ಈಗ ಹದಿನೈದು ದಿನ ಹಿಂದೆ ಕೆಲವರು ಯಾತ್ರಿಕರು ಬಂದರು. ಅವರು

ಬಂದ ಕಾಲವು ಸಾರೀಶಂಕರಕ್ಕೆ ಹೋಗಲು ತಕ್ಕ ಕಾಲವಾಗಿರಲಿಲ್ಲ. ಆದರೂ ಬಂದ ಕಷ್ಟಗಳನ್ನೆಲ್ಲ ಅರಗಿಸಿಕೊಳ್ಳುತ್ತೇವೆ, ಸತ್ತರೂ ಪುಣ್ಯ ಬರುತ್ತದೆ ಎಂದು ಅವರು ಮುಷ್ಕರ ಹಿಡಿದುದರಿಂದ ಅವರನ್ನು ಕರೆದು ಕೊಂಡೇಹೋಗಬೇಕಾಯಿತು. ನಮ್ಮ ರಕ್ಷಣೆಗೆ ಬೇಕಾದ ಸಲಕರಣೆ ಗಳನ್ನೆಲ್ಲ ಹೊಂದಿಸಿಕೊಂಡು ನಡೆದೆವು.

ನಡೆದು, ನಡೆದು, ನಡೆದು ತುದಿಯ ಬಂಡೆಗೆ ಬರುವ ವೇಳೆಗೆ ಗತ ಪ್ರಾಣರಾದೆವು. ಹೇಗಾದರೂ ಸೇರಿದೆವಲ್ಲ ಎಂದು ಉಬ್ಬಿ ಆ ಬಂಡೆಗೆ ಅಡ್ಡಬಿದ್ದು ಮೇಲೆದ್ದೆವು.

ಮೇಲೆದ್ದೆವು. ಎದ್ದು ನೋಡಿದರೆ—ಎದುರಿಗೊಂದು ಕೃಷ್ಣವರ್ಣದ ವಿಗ್ರಹ! ಬಿಳಿಯ ದಟ್ಟಿ....ತಂಬಾಕಿನಿಂದ ಉಬ್ಬಿದ ದಾಡೆ....ಮೂಗ ವಿಾರಿಸಿದ ಡೊಳ್ಳು....ಕೊರಳಿಂದ ಜೋತಿಟ್ಟು ಡೊಳ್ಳಲ್ಲಿ ನೇತಿಟ್ಟ ತಟ್ಟೆ.... ತಟ್ಟೆಯಲ್ಲಿ ಲೋಟ....ಲೋಟದಲ್ಲಿ........

ನಾವೆಲ್ಲ ಕಣ್ಣುಬಿಟ್ಟು ಬಂದ ಮೂರ್ತಿಯನ್ನೇ ನೋಡುತ್ತಿರಲು, ಮೂರ್ತಿಯು ಬಾಯಿತೆರೆದು "ಷುಡುಷುಡುಕಾಫಿ ಷಾರ್! ಷುಡು ಷುಡುಕಾಫಿ!" ಎಂದಿತು.

# ನನ್ನ "ಹಾಬಿ"

ಕೆಲವರ "ಹಾಬಿ" ಹೋಟೆಲಿಗೆ ಹೋಗುವುದು. ಕೆಲವರದು ಹೆಣ ಹೊರುವುದು. ತಿಥಿ ಊಟ ಕೆಲವರದು. ಇನ್ನೂ ಕೆಲವರದು ಖಾಯಿಲೆ ಮಲಗುವುದು. ಹೀಗೆಯೆ ಒಬ್ಬೊಬ್ಬರಿಗೆ ಒಂದೊಂದು "ಹಾಬಿ" ಇರುತ್ತದೆ. ನನ್ನ "ಹಾಬಿ" ಎಂದರೆ ಸಾಲ ಕೇಳುವುದು.

ಸಾಲ ಕೇಳುವುದಕ್ಕೆ ಎರಡು ಕಾರಣ ಉಂಟು. ಒಂದು ಆವಶ್ಯಕತೆ. ಒಂದನೇ ತಾರೀಖಿನ ಸಂಜೆ ಲಕ್ಷ್ಮೀನಾರಾಯಣನಾಗಿದ್ದರೆ, ಎರಡನೆಯ ತಾರೀಖು ಬೆಳಿಗ್ಗೆ ದರಿದ್ರನಾರಾಯಣನಾಗಿರುತ್ತೇನೆ. ಅದಕ್ಕೋಸ್ಕರ ಸಾಲಕ್ಕೆ ಹೋಗಬೇಕಾಗುತ್ತದೆ. ಇನ್ನೊಂದೊಂದು ಸಲ ಮಾಡುವುದಕ್ಕೇನೂ ಇಲ್ಲದಿದ್ದಾಗ, ಇಲ್ಲ ಏನಾದರೂ ಮಾಡಿ ಬೇಜಾರಾದಾಗ ಆ ಬೇಜಾರು ಕಳೆದುಕೊಳ್ಳಲು ಸಾಲಕ್ಕೆ ಹೊರಡುವುದು.

ಈ ಎರಡನೆಯ ಸಂದರ್ಭದಲ್ಲಿ ಸಾಲ ಕೇಳಬೇಕಾದರೆ ಯಾರು ಕೇಳಿದರೆ ಕೊಡುವರು ಅವರ ಬಳಿ ಹೋಗುವುದಿಲ್ಲ. ಯಾರು ಹಣ ಇಟ್ಟುಕೊಂಡೂ ಕೈಬಿಚ್ಚುವುದಕ್ಕೆ ಸಾಯುತ್ತಾರೆ ಎಂದು ಗೊತ್ತಿರುತ್ತೆ—ಅವರ ಹತ್ತಿರವೇ ಹೋಗುವುದು. ಹೀಗೆ ಹೋಗುವುದಕ್ಕೆ ಹೊತ್ತು ಗೊತ್ತಿಲ್ಲ. ಬೇಜಾರಾದಾಗ ಹಾಗೆಯೇ ಈ ಜಿಪುಣರ ಕಡೆ ಹೋಗುವುದು.... ಹೋಗಿ ಅದು ಇದು, ಕಲ್ಕತ್ತೆಯ ಕೊಲೆ, ಬೊಂಬಾಯಿನ ಬಾಂಬ್ ಕೇಸು, ಸೋಲಾಪುರದ ಸೂಳೆ ಇತ್ಯಾದಿ ವಿಷಯಗಳನ್ನು ವಿಚಾರಿಸುತ್ತ ಮಾತನಾಡುತ್ತಿರುವಂತೆಯೇ ಒಂದು ಹತ್ತು ರೂಪಾಯಿ ಕೇಳುವುದು. ಕೇಳಿ ಮಾತು ನಿಲ್ಲಿಸಿ ಅವರ ಮುಖವನ್ನು ಓದುವುದು.

ಆಗ ನೋಡಬೇಕು ಆ ವಿಚಿತ್ರಮುಖಮಂಡಲವನ್ನು! ಆ ಮುಖದಲ್ಲಿ ವಿವಿಧ ಭಾವಗಳ ಹುಚ್ಚುಹುಚ್ಚು ಕುಣಿತವನ್ನು ನೋಡಬೇಕು—ಹೇಳಿ ಸುಖವಿಲ್ಲ, ಅದನ್ನು ನೋಡಬೇಕು. ಕೊಳದೆದೆಯ ತುಂಬ ಕಡ್ಡಿಕಸ ತೇಲಿಬಿಟ್ಟು ಹತ್ತೂ ಕಡೆಯಿಂದ ಕಲ್ಲುಮಳೆ ಬೀರುತ್ತ ಇದ್ದರೆ ಕೊಳ ಹೇಗಿರು

ತ್ತದೆ ನೋಡಿದ್ದೀರೇನು! ಅವರ ಮುಖ ಹಾಗಿರುತ್ತದೆ ಎಂದರೆ ಸತ್ಯದ ಸೀರೆಯು ಅಂಚಿನ ಗಾಳಿ ಸುಳಿದ ಹಾಗೆ.

ಆ ಕುಣಿತ ಕಡಿಮೆಯಾಗುತ್ತಿರುವಾಗ ಅವರು ಇಲ್ಲವಲ್ಲ ಎನ್ನುವ ಕಾಲದಲ್ಲಿ ತೋರುವ ಕಳ್ಳಪೇಚಾಟ ನೋಡುವುದು. ಅವರು ಹೇಳುವ ಕಾರಣಗಳನ್ನೆಲ್ಲ ಕೇಳುವುದು. ಪಾಪ! ಹೋದವಾರ ಅವರ ಭಾವನ ಮೊಮ್ಮಗನ ಮೈದುನನ ಮನೆಯಲ್ಲಿ ಹತ್ತು ಮದುವೆ ಇಪ್ಪತ್ತು ಶ್ರಾದ್ಧ ನಡೆಯಿತಂತೆ! ಸಾಲದುದಕ್ಕೆ ಐದು ನಿಮಿಷ ಹಿಂದೆ ವೆಂಕಟಪ್ಪ ಐವತ್ತು ರೂಪಾಯಿ ಸಾಲ ತೆಗೆದುಕೊಂಡು ಹೋದನಂತೆ! ಇತ್ಯಾದಿ........ಕಡೆಗೆ ಮುಗಿದುಹೋಯಿತೇ ಎಂದುಕೊಂಡು ಹಿಂದಿರುಗುವುದು.

ಆದರೆ ಈ "ಹಾಬಿ" ಯಲ್ಲಿ ಒಂದೇ ದೋಷ—ಹೋದವನ ಹತ್ತಿರ ಪುನಃ ಹೋಗುವ ಹಾಗಿಲ್ಲ. ಅವರಿಗೆ ಅನುಮಾನ—ಒಂದು ಸಲ ಸಾಲ ಕೇಳಿದವನು ಮತ್ತೆ ಬಂದನೆಂದರೆ ಸಾಲ ಕೇಳುವುದಕ್ಕೇ ಎಂದು. ಅದರಿಂದ ಸ್ವಾರಸ್ಯ ಹೋಗುತ್ತದೆ. ಆದರೂ ಈ ಲೋಪದೋಷಗಳಿದ್ದರೂ ಇಂತಹ "ಹಾಬಿ" ಬೇರೊಂದನ್ನು ನಾನು ಕಂಡಿಲ್ಲ.

ಬಹಳ ಹೆಚ್ಚಾಗಿ ಬಾಯಿ ಬಿಟ್ಟೆನೆಂದು ಕಾಣುತ್ತದೆ. ಆ ಮೇಲೆ ಸಾಲ ಕೊಡುವವರು ಕೂಡ ಇಲ್ಲ ಅಂದಾರು! ನಮಸ್ಕಾರ.

# ಸರಿ ಮತ್ತೆ !

ದಾದಾ ಪಾಪರಸೂ ಶ್ರೀನಾಥನೂ ಕಾಲೇಜಿನಲ್ಲಿ ಓದುತ್ತಿರುವಾಗ ಇಬ್ಬರ ಹೃದಯಗಳೂ ಹೆಣೆದುಕೊಂಡುವು. ಕಾಲೇಜಿನ ವಿದ್ಯಾಭ್ಯಾಸವು ಮುಗಿದ ಮೇಲೆ ಪಾಪರಸು ಮಲಯದ್ವೀಪದಲ್ಲಿ " ಎಸ್ಟೇಟ್ ಏಜೆಂಟ್ " ಆಗಿ ತಿಂಗಳಿಗೆ ನಾನೂರು ರೂಪಾಯಿ ಸಂಬಳದ ಮೇಲೆ ಹೋದ. ಶ್ರೀನಾಥನು ಮೈಸೂರಿನಲ್ಲಿ ತಿಂಗಳಿಗೆ ನಾಲ್ವತ್ತು ರೂಪಾಯಿನ ಗುಮಾಸ್ತನಾದ.

ಇದಾದ ಎಂಟು ವರುಷಗಳ ಮೇಲೆ ಪಾಪರಸು ಮತ್ತೆ ಕಾರ್ಯಾರ್ಥವಾಗಿ ಮೈಸೂರಿಗೆ ಬಂದ. ಎಂಟು ವರುಷಗಳು ಸ್ನೇಹಿತರು ಒಬ್ಬರನ್ನೊಬ್ಬರು ಕಾಣದಿದ್ದರೂ ಪತ್ರವ್ಯವಹಾರವಿಟ್ಟಿದ್ದರು. ದಾದಾ ಪಾಪರಸು ಮೈಸೂರಿಗೆ ಬಂದ ಸುದ್ದಿ ಶ್ರೀನಾಥನಿಗೆ ತಿಳಿಯಿತು. ಆದಿತ್ಯವಾರ ಬೆಳಿಗ್ಗೆ ಎಂಟೂವರೆ ಗಂಟೆಗೆ ಪಾಪರಸನನ್ನು ಕಾಣಲು ಹೋಗಬೇಕೆಂದು ಶ್ರೀನಾಥನೂ ಶ್ರೀನಾಥನನ್ನು ಕಾಣಲು ಹೋಗಬೇಕೆಂದು ಪಾಪರಸೂ ಮನಸ್ಸುಮಾಡಿಕೊಂಡರು. ಏಷ್ಟಾದರೂ ಹೆಣೆದ ಹೃದಯಗಳಲ್ಲವೆ !

ಈ ಸಮಾಗಮಕ್ಕೆ ಅವರಿಬ್ಬರ ಸಂಭ್ರಮವಷ್ಟಿಷ್ಟಲ್ಲ !

ಶ್ರೀನಾಥನು " ಪಾಪರಸಂತಹ ದೊಡ್ಡಮನುಷ್ಯನನ್ನು ಕಾಣಲು ಹೋಗುವಾಗ—ಸ್ನೇಹಿತನಾದರೇನಂತೆ—ಹಿಸಿದ ಪಂಚೆ ಹರಿದ ಷರಟು ಹಾಕಿಕೊಂಡು ಹೋದರೆ ಚೆನ್ನಾಗಿರುತ್ತದೆಯೆ ! " ಎಂದು ಅಸಾಧ್ಯ ಪ್ರಯತ್ನಮಾಡಿ ಎಂಟು ಹತ್ತು ಮಂದಿಯಲ್ಲಿ ತಿರುಪೆಬೇಡಿ ಎರವಾಗಿ ಕೆಲವು ವಸ್ತುಗಳನ್ನು ಉಡಲೂ ತೊಡಲೂ ತಂದ.

ಪಾಪರಸು " ಪಾಪ ! ಶ್ರೀನಾಥನು ತೀರ ಬಡವ. ಅವನ ಕಡೆ ಹೋಗುವಾಗ ನಾನು ಈ ಭಾರಿಬಟ್ಟೆಗಳನ್ನು ಹಾಕಿದರೆ ಅವನನ್ನು ಹಂಗಿಸಿದ ಹಾಗಾಗುತ್ತದೆ " ಎಂದು ಕೆಲವು ಬಟ್ಟೆಗಳನ್ನು ಹೊಸದಾಗಿ ಮಿಲ್ಲ್ ಬಟ್ಟೆಯಲ್ಲಿ ಹೊಲಿಯಿಸಿದ.

## ಹನಿಗಳು

ಆದಿತ್ಯವಾರ ಬೆಳಿಗ್ಗೆ! ಶ್ರೀನಾಥನ ಅವಾಂತರವ್ರೋ ಅವಾಂತರ! ಗರಿಹಿಡಿದು ಬಿಗಿದುಟ್ಟ ಜರತಾರಿ ಅಂಚಿನ ಪಂಚೆ....ಸಿಲ್ಕ್ ಷರಟು.... ಬ್ಲೇಸರ್ ಕೋಟು....ಕೋರಾ ಪೇಟ....ಕಾಲಿಗೆ ಬೂಟ್ಸು....ಎದೆ ಮೇಲೆ ಗಡಿಯಾರದ ಚಿನ್ನದ ಸರಪಣಿ....ಸಾಲದುದಕ್ಕೆ ಏರಿಹೋಗಲು ಒಂದು ಟಾಂಗ! ಪಾಪರಸು ತಾಸು ಹೊಲಿಸಿದ್ದ ಮಿಲ್ಲ್ ಬಟ್ಟೆಗಳನ್ನು ಹಾಕಿಕೊಂಡು ನಡಿಗೆಯಲ್ಲಿ ಹೊರಟ.

ಚೌಕದಲ್ಲಿ ಸ್ನೇಹಿತರಿಬ್ಬರೂ ಕಲೆತಾಗ ಶ್ರೀನಾಥನೇ ಮುಂಚೆ ಪಾಪರಸನ್ನು ಗುರುತಿಸಿದನು. ಇಬ್ಬರೂ ಕೈಕುಲಿಕಿ ಒಬ್ಬರನ್ನೊಬ್ಬರು ರೆಪ್ಪೆ ಹೊಯ್ಯದೆ ನಖಶಿಖಾಂತವಾಗಿ ನೋಡಿದರು.

"ಅಲ್ಲ! ಬರುವ ನಲವತ್ತು ರೂಪಾಯಿನಲ್ಲಿ ಈ ಜರತಾರಿ ಜರುಬು ಮಾಡುತ್ತಿದ್ದರೆ ಇವನಿಗೆ ಬಡತನ ಹೇಗೆ ಬಿಡುತ್ತದೆ? ಸರಿ ಮತ್ತೆ!" ಎಂದು ಪಾಪರಸು ತನ್ನಲ್ಲಿಯೇ ತಾನೆಂದುಕೊಂಡ.

"ಮೂತ್ರದಲ್ಲಿ ಮೀನು ಹಿಡಿಯುವ ಮನುಷ್ಯ ಇವನು! ನಾನು ಹತ್ತು ತಿಂಗಳು ಸಂಪಾದಿಸುವುದನ್ನು ಇವನು ಒಂದು ತಿಂಗಳಿಗೇ ಗಿಟ್ಟಿಸುತ್ತಾನೆ. ಆದರೂ ಇವನು ಹಾಕಿರುವ ಬಟ್ಟೆ ನೋಡು! ಹೀಗೆ ಜಿಪುಣತನ ಮಾಡದಿದ್ದಿದ್ದರೆ ಹೀಗೆ ದುಡ್ಡುಕೂಡಿ ಹಾಕುತ್ತಿದ್ದನೆ ಇವನು! ಸರಿ ಮತ್ತೆ!" ಎಂದು ಶ್ರೀನಾಥನೂ ಮನಸ್ಸಿನಲ್ಲಿಯೇ ಅಂದುಕೊಂಡ.

ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಂಡರು!

# ಸಂಕಲ್ಪಸಾಧನೆ

ಬೆಂಗಳೂರಿನಲ್ಲಿ ಮುಕ್ಕಾಲುಪಾಲು ಎಲ್ಲರಿಗೂ ಗೋಪಾಲಿ ಗೊತ್ತು. ಪ್ರತಿದಿನವೂ ಲೈಬ್ರೆರಿಗೆ ಹೋಗಿ, ಅಲ್ಲಿರುವ ವೈದ್ಯಗ್ರಂಥಗಳನ್ನು ತೆಗೆದು, ಯಾವ ಯಾವ ರೋಗಗಳಿಗೆ ಏನೇನು ಚಿಹ್ನೆಗಳೆಂಬುದನ್ನು ಹುಡುಕಿ, ಅದರಲ್ಲಿ ಯಾವ ಯಾವ ಚಿಹ್ನೆಗಳು ತನಗೆಷ್ಟೆಷ್ಟಿವೆ ಎಂದು ಲೆಕ್ಕಹಾಕಿ, ಅದರ ಮೇಲೆ ತನಗೆಂತೆಂತಹ ರೋಗಗಳಿರಬೇಕೆಂದು ಪತ್ತೆಮಾಡಿ, ಆ ರೋಗಗಳಿಗೆ ಔಷಧಿಗಾಗಿ ಔಷಧದಂಗಡಿಗಲೆಯುತ್ತಿದ್ದವನಿವನೇ! ಈ ಪುಣ್ಯಾಪುರುಷನ ತಾತ ತಿಮ್ಮಪ್ಪಯ್ಯ!

ಹೋದ ವರುಷ ತಿಮ್ಮಪ್ಪಯ್ಯನಿಗೆ ತಪಸ್ಸುಮಾಡಬೇಕೆಂಬ ಹುಚ್ಚು ಹತ್ತಿತು. ಮುದುಕನಿಗೆ ಅರುವತ್ತೈದು ವರುಷ. ಸಾಲದುದಕ್ಕೆ ಅವನ ವಂಶದಲ್ಲಿ ಎಲ್ಲರಿಗೂ ತಲೆಯಲ್ಲಿ ಕೊಂಚ ಖಾಲಿ ಹೆಚ್ಚು. "ಹಿಂದಿನ ಯುಗಗಳಲ್ಲಿ ಕಾಮಿಗಳು ಭಗವಂತನನ್ನು ಕುರಿತು ತಪಸ್ಸುಮಾಡಿ ಬೇಕಾದುದನ್ನು ಪಡೆಯುತ್ತಿದ್ದರು. ಈಗ ನಾನೂ ಹಾಗೆಯೇ ಮಾಡಿ ವಿಪುಲೈಶ್ವರ್ಯವನ್ನು ಸಂಪಾದಿಸಬೇಕು" ಎಂದು ತಪಸ್ಸಿದ್ಧಿಗಾಗಿ ತನ್ನ ಹಳೆಯ ಮನೆಯ ನೆಲಮಾಳಿಗೆಯಲ್ಲಿ ಅನ್ನ ನೀರು ಬಿಟ್ಟು "ನಾರಾಯಣಾ! ಗೋವಿಂದಾ! ಗೋವಿಂದಾ! ನಾರಾಯಣಾ!" ಎಂದು ದೇವರ ಸ್ಮರಣೆಗೆ ತೊಡಗಿದ.

ಹೀಗೆ ಒಂದು ವಾರ ಮಾಡುತ್ತ ಅವನಿಗೆ ನಿಶ್ಶಕ್ತಿ ಹೆಚ್ಚಾಯಿತು. ಸಾಯುವ ಹಾಗಾದ. ಮನೆಯವರು ಎಷ್ಟೋ ಹೇಳಿದರು. "ಮೇಲಕ್ಕೆ ಬನ್ನಿ, ಈ ಹುಚ್ಚು ಬೇಡ" ಎಂದು. ಆ ಸ್ಥಿತಿಯಲ್ಲಿಯೂ ಮುದುಕ ಅವರ ಮೇಲೆ ರೇಗಿ ಉರಿದುರಿದು ಬಿದ್ದ.

ಈ ಸುದ್ದಿ ನನಗೆ ತಂದರು. ಮುದುಕನಿಗೆ ಈ ಹುಚ್ಚು ಬಿಡಿಸುತ್ತೇನೆಂದು ಮನೆಯವರಿಗೆ ಧೈರ್ಯ ಹೇಳಿ, ಒಂದು ಉಪಾಯ ಹುಡುಕಿ ಅದರ ಉಪಯೋಗಕ್ಕೆ ಅವರ ಅಪ್ಪಣೆ ಪಡೆದೆ; ನಾಟಕದ ಕಂಪನಿಯಿಂದ

ಸಾಮಾನು ಎರವು ತಂದು ವಿಷ್ಣುವಿನ ಪಾತ್ರ ಧರಿಸಿ ಮುದುಕನಿಗೆ ವರಪ್ರದಾನ ಮಾಡುವಂತೆ ಮೋಸಮಾಡಬೇಕೆಂದು. ಸಾಯುವವನನ್ನು ಬದುಕಿಸುವುದಕ್ಕೆ ಮೋಸವೂ ಆಗಬಹುದು. ಏನಾದರೂ ಆಗಬಹುದು!

ಎಂಟನೆಯ ದಿನ ರಾತ್ರಿ....ಒಂಭತ್ತು ಗಂಟೆಯ ಸುಮಾರು....ನೆಲ ಮಾಳಿಗೆಯ ಮೂಲೆಯಲ್ಲಿ ಸಣ್ಣ ಮೇಣದಬತ್ತಿ ಉರಿಯುತ್ತಿದೆ....ಸುತ್ತ ಸದ್ದಿಲ್ಲ....ಮುದುಕನು ಗೋಡೆಯಕಡೆ ಮುಖಮಾಡಿ "ನಾರಾಯಣಾ! ಗೋವಿಂದಾ!" ಎಂದು ಕೂಗುತ್ತಿದ್ದಾನೆ....

ನಾನು ವಿಷ್ಣುವಿನ ವೇಷಹಾಕಿಕೊಂಡು ಬಂದು, ಸದ್ದಿಲ್ಲದೆ ಅವನ ತಲೆದೆಸೆ ನಿಂತು ಗಂಭೀರವಾಗಿ "ಭಕ್ತ! ತಿಮ್ಮಪ್ಪಯ್ಯ! ನನ್ನನ್ನು ನೀನು ಕರೆದುದೇಕೆ?" ಎಂದೆ.

ತಿಮ್ಮಪ್ಪಯ್ಯನು ಬೆಚ್ಚಿ ನನ್ನ ಕಡೆ ತಿರುಗಿ ತನ್ನ ಕಣ್ಣುಗಳಿಂದ ನನ್ನನ್ನು ಹೀರಿಕೊಳ್ಳುತ್ತ "ಸ್ವಾಮಿ! ನಾರಾಯಣಾ! ಕಡೆಗಾದರೂ ಭಕ್ತನಮೇಲೆ ದಯೆ ಬಂತೆ!" ಎಂದು ಮೇಲುಸಿರಿಡುತ್ತ ನುಡಿದ.

ನನಗೆ "ನಾನೇಕೆ ಮೋಸಮಾಡುವೆನೋ!" ಎನ್ನಿಸಿತು. ಆದರೇನು ಮಾಡುವುದು!

ಮತ್ತೆ ಗಂಭೀರವಾಗಿ "ಭಕ್ತ! ನಿನ್ನ ಕೋರಿಕೆಯಂತಿದೋ ಬಂದಿರುವೆನು. ನಿನಗೇನು ಬೇಕು—ಕೇಳು" ಎಂದೆ.

ತಿಮ್ಮಪ್ಪಯ್ಯನು ಕಣ್ಣಾರೆ ಮುಚ್ಚಿ, ನಾಲಿಗೆಯನ್ನು ಹೊರಚಾಚಿ, ಉಸಿರಿಲ್ಲದ ಉಸಿರಿನಲ್ಲಿ "ಏನೂ ಬೇಡ....ಒಂದು.... ಅರೆಲೋಟ.... ನಿಂಬೆ....ಹಣ್ಣಿನ ಪಾನಕ" ಎಂದ!

# ರಂಗಾಜೆಟ್ಟಿಯ ಜುಟ್ಟು

ರಂಗಾಜೆಟ್ಟಿ ರುಸ್ತುಂ ಜೆಟ್ಟಿ. ಇದ್ದಬದ್ದ ಜಟ್ಟಿಗಳಿಗೆಲ್ಲ ಮಣ್ಣು ಮುಕ್ಕಿಸಿ ಜಗಜೆಟ್ಟಿಯೆನ್ನಿಸಿಕೊಂಡಿದ್ದ. ಹೀಗಿರಬೇಕಾದರೆ ಒಂದು ದಿನ ರುಸ್ತುಂ ರಹೀಮನೆಂಬ ಪೈಲ್ವಾನನು ಬಂದುದನ್ನು ಕೇಳಿ "ಇವನೆಲ್ಲಿ ಚಿಗಿತುಕೊಂಡ ಈ ಹೈದ!" ಎಂದು ರಂಗಾಜೆಟ್ಟಿಗೆ ಆಶ್ಚರ್ಯವಾಯಿತು. ಆದರೇನು! ರಂಗಾಜೆಟ್ಟಿಯಲ್ಲವೆ! "ಈ ಮುಕ್ಕಂಗೆದುರ್ಬುಟ್ರೆ ಆಗೋತು! ಬಂದಾ ಅಂದ್ರೆ ಅವನ್ಕುತ್ತಿಗ್ಕೈ ಮಿಲಾಯಿಸ್ಬುಟ್ಟಿ" ಎಂದುಕೊಳ್ಳುತ್ತ ತನ್ನ ಕುತ್ತಿಗೆಗೇ ಕೈ ಮಿಲಾಯಿಸಿಕೊಳ್ಳುತ್ತ ಪಟ್ಟು ನೆನಪುಮಾಡಿಕೊಳ್ಳುತ್ತಿದ್ದ.

ಹೀಗಿರಬೇಕಾದರೆ ಕುತ್ತಿಗೆಯನ್ನು ಸವರಿಕೊಳ್ಳುತ್ತಿದ್ದ ರಂಗಾಜೆಟ್ಟಿಯ ಕೈಗೆ ತಾಮ್ರದ ಚೊಂಬಿನ ತುದಿಯಲ್ಲಿಟ್ಟ ಪಿಳ್ಳಾರಿಯಂದದ ಕೂದಲು ಸಿಕ್ಕಿತು. ಕೂದಲು ಸಿಕ್ಕಲು ರಂಗಾಜೆಟ್ಟಿಯ ಮನಸ್ಸು ಬೇರೆ ಕಡೆ ಓಡಿತು. ಮನಸ್ಸಿನ ವಿಚಿತ್ರ ವ್ಯಾಪಾರ ಚಕ್ರಭ್ರಮಣದಲ್ಲಿ ತಲೆಯ ಹಿಂದಿರುವ ಕೂದಲ ಗಂಟನ್ನು ಮುಖದ ಮುಂದಕ್ಕೆ ತರಬೇಕು ಎನ್ನಿಸಿತು. ಮಾಂಸದ ಮುದ್ದೆಯ ಮಲೆಗಳನ್ನೇ ಮಲಗಿಸಿರುವಾಗ ಈ ಜುಟ್ಟನ್ನು ಬಗ್ಗಿಸುವುದು ಕಷ್ಟವೇ ಎಂದುಕೊಂಡು ರಂಗಾಜೆಟ್ಟಿ ಜುಟ್ಟನ್ನು ಮುಂದುಗಡೆಗೆ ಎಳೆದ. ಎಳೆದ, ಎಳೆದ, ಎಳೆದ. ಎಳೆದದ್ದೂ ಎಳೆದದ್ದೆ. ಜುಟ್ಟು ಮುಂದಕ್ಕೆ ಬರಲಿಲ್ಲ. ಹಿಂದೆಯೇ ನೇತಾಡುತ್ತಿತ್ತು. ಆರು ಕೂದಲು ಮೂರಾಯ್ತು. "ಇದು ಸುಖವಿಲ್ಲ. ಬೇರೆ ಹಿಕ್ಮತ್ತು ಮಾಡಬೇಕು" ಎಂದುಕೊಂಡು ರಂಗಾಜೆಟ್ಟಿ ಮುಖವನ್ನು ಮೇಲಕ್ಕೆ ತಿರುಗಿಸಿದ. ಕೆಳಕ್ಕೆ ತಿರುಗಿಸಿದ. ಬಲಗಡೆ ತಿರುಗಿಸಿದ. ಎಡಗಡೆ ತಿರುಗಿಸಿದ. ಆಗುವ ಹಾಗೆಲ್ಲ ತಿರುಗಿಸಿದ. ಚಕ್ರ ಸುತ್ತಿಸಿದ. ಲಾಗ ಹಾಕಿದ. ಏನು ಮಾಡಿದರೂ ಜುಟ್ಟು ಹಿಂದೆಯೇ ಕುಣಿಯುತ್ತಿತ್ತು. ರಂಗಾಜೆಟ್ಟಿಯ ಮುಖ ಗಾರಾಯ್ತು. ಮೈಯಲ್ಲಿ ಬೆವರು ಕಿತ್ತುಕೊಂಡಿತು. ಜೆಟ್ಟಿಗಳಿಗೆ

ಸೋಲದವನು ಈ ಜುಟ್ಟಿಗೆ ಸೋತೆನಲ್ಲಾ ಎಂದು ಅವಮಾನವಾಯಿತು ಅವಮಾನದಿಂದ ರೋಷವುತ್ಪನ್ನವಾಗಲು ಅಂದಿನಿಂದ ಕುಸ್ತಿಮಾಡು ವುದಿಲ್ಲವೆಂದು ಶಪಥಮಾಡಿ ಕಾಚ ಹರಿದೆಸೆದವನು ಪುನಃ ಅಖಾಡ ಕ್ಕಿಳಿಯಲಿಲ್ಲ!

ಇದನ್ನು ಕೇಳಿ ಮುದಿ ಗಂಗಾಜೆಟ್ಟಿಯು "ವಾರೆ ಮೇರೆ ವಸ್ತಾದ್ ಅದೀಗ! ಒಂದು ದಫ ಸೋತ ಅಂದರೆ ಮತ್ತೆ ಕಾಚಾ ಕಟ್ಟೋದುಂಟ ವಾರೆ ಮೇರೆ ವಸ್ತಾದ್!" ಎಂದ.

# ಅನಿಷ್ಟಕ್ಕೆ ಶನೀಶ್ವರ ಗುರಿ !

ಒಂದು ಸಲ ಬೆರಳು ಸುಟ್ಟುಕೊಂಡಿದ್ದೇನೆ. ಅದು ಸಲುವು ಆ ಹೊತ್ತಿನಿಂದ ಯಾರಿಗಾದರೂ ಏನಾದರೂ ಕೆಲಸಮಾಡಿಕೊಡಬೇಕಾದರೆ "ಇದಕ್ಕೆ ಪ್ರತಿಫಲವಾಗಿ ತಾವು ಏನಾದರೂ ಮಾಡುವುದಾದರೆ ಅದು ಏನು ?" ಎಂದು ಸ್ಪಷ್ಟವಾಗಿ ಕೇಳಿ, ಅದರ ತಪಶೀಲನ್ನೆಲ್ಲಾ ವಿಶದವಾಗಿ ವಿಚಾರಿಸಿ, ಅದರ ಗುಣಾವಗುಣಗಳ ಬಗೆಗೆ ಗುಣಾಕಾರ ಹಾಕಿ, ಬಹಳ ಯೋಚನೆ ಮಾಡಿ ಮನಸ್ಸು ಒಪ್ಪಿದರೆ ನಾನೂ ಒಪ್ಪುತ್ತೇನೆ.

ಈಗ ಮುವ್ವತ್ತೆಂಟು ವರುಷಗಳ ಕೆಳಗೆ ಒಂದು ಐಬು ನಡೆಯಿತು. ಅದನ್ನು ಇದುವರೆಗೂ ತಿದ್ದುವುದಕ್ಕಾಗಿಲ್ಲ. ಅದಕ್ಕೇ ಈಗ ಏನು ಕಂಡರೂ ಅನುಮಾನ !

ಮುವ್ವತ್ತೆಂಟು ವರುಷಗಳ ಕೆಳಗೆ ಒಂದು ದಿನ ಶಾಲೆಗೆ ಹೊತ್ತಾಯಿತೆಂದು ಅವಸರದಲ್ಲಿ ಓಡುತ್ತಿದ್ದೆ. ದಾರಿಯಲ್ಲಿ ಒಬ್ಬಳು ಬೆರಣಿ ಮಾರುವವಳು ಗೂಡೆಯಿಳಿಸಿ ನಿಂತಿದ್ದಳು. ಇಳಿಸುವುದು ಇಳಿಸಿಬಿಟ್ಟಳು—ಮಹರಾಯಿತಿ—ಪುನಃ ಎತ್ತಿಕೊಳ್ಳುವುದಕ್ಕೆ ಕಸುವು ಕಡಿಮೆ. ದಾರಿಯಲ್ಲಿ ಹೋಗುವ ಧಾಂಡಿಗರಿಗೆಲ್ಲ ದಮ್ಮಯ್ಯಗುಡ್ಡೆ ಹಾಕಿದಳು. "ದಯವಿಟ್ಟು ಗೂಡೆ ತಲೆಮೇಲೆ ಹೊರಿಸಿ" ಎಂದು. ಆದರೆ ಒಬ್ಬನಾದರೂ ಅದನ್ನು ಕಿವಿಗೆ ಹಾಕಿಕೊಳ್ಳಬೇಕಲ್ಲ ! ನಾನು ಅದನ್ನು ನೋಡಿ—ನಾನಾಗ ಇನ್ನೂ ಚಿಕ್ಕವನಾಗಿದ್ದೆ, ಧಾಂಡಿಗನಾಗಿರಲಿಲ್ಲ—"ಪಾಪ ! ಮುದುಕಿ ! ಶಾಲೆಗೆ ವೇಳೆಯಾದರೂ ಚಿಂತೆಯಿಲ್ಲ" ಎಂದುಕೊಂಡು ಆ ಗೂಡೆಯನ್ನು ಅವಳ ತಲೆಮೇಲೆ ಸರಿಯಾಗಿ ಇರಿಸಿದೆ. ಹೊರಡುವಾಗ ಮುದುಕಿ—ಎಷ್ಟಾದರೂ ಹಿಂದಿನ ಕಾಲದವಳು—ನಗುಮುಖ ಮಾಡಿಕೊಂಡು "ನಿನಗೆ ಗೌರಿಯಂಥ ಹೆಂಡತಿ ಬರಲಿ ನನ್ನ ಚಿನ್ನ !" ಎಂದು ಹರಸಿದಳು. ನನ್ನ ಮುಖ ಕೆಂಪಾಯ್ತು. ಹೊರಟುಹೋದೆ.

ನನಗೆ ಇಂತಹ "ಗೌರಿ" ಬರುತ್ತಾಳೆ ಎಂದು ತಿಳಿದಿದ್ದಿದ್ದರೆ—ಅವಳ

ಪ್ಪನಾಣೆ—ಅವಳ ಗೂಡೆ ಮುಟ್ಟುತ್ತಲೇ ಇರಲಿಲ್ಲ. ವಿಷಯ ಏನಾಗಿದೆ ಎಂದರೆ—ಮುದುಕಿಯೇನೋ ಒಳ್ಳೆಯ ಮನಸ್ಸಿನಲ್ಲಿಯೇ ನುಡಿದಳು; ಆದರೆ ದೇವರು ಅವಳ ಹರಕೆಯನ್ನು ಸಫಲಮಾಡುವ ಅವಸರದಲ್ಲಿ "ಗೌರಿ" ಬುಟ್ಟಿಗೆ ಕೈ ಹಾಕುವ ಬದುಲು "ಚಂಡಿ" ಬುಟ್ಟಿಗೆ ಭ್ರಮಿಸಿ ಕೈ ಹಾಕಿಬಿಟ್ಟ! ಈ ಅವಸರದಲ್ಲಿ ದೇವರು ಮಾಡಿದ ಅವಾಂತರ ಈಗ ನನ್ನ ಕುತ್ತಿಗೆಗೆ ಬಂದಿದೆ.

ಎಂದರೆ—ನನ್ನ ಚಂ—ಅಲ್ಲ, ಗೌರಿಗೆ ನಾನು ಹೆದರುತ್ತೇನೆಂದಲ್ಲ. ಆದರೂ ಒಂದೊಂದು ಸಲ ಸೋಮಸುಂದರ ಎನ್ನುವ ನನ್ನ ಹೆಸರನ್ನು ಭೈರವಮೂರ್ತಿ ಎಂದು ಬದಲಾಯಿಸಿಬಿಡಲೇ ಎಂಬ ಯೋಚನೆ ಬರುತ್ತದೆ.

ಹಾಗೆಯೆ ಕುಳಿತು ಇಷ್ಟು ಅಧ್ವಾನಕ್ಕೂ ಯಾರು ಕಾರಣರು ಎಂದು ನೋಡಿದರೆ—ಒಳ್ಳೆಯ ಮನಸ್ಸಿನಲ್ಲಿ ನುಡಿದ ಮುದುಕಿಯೂ ಅಲ್ಲ, ಮುದುಕಿಯ ಹರಕೆ ಸಲಿಸಿದ ದೇವರೂ ಅಲ್ಲ; ನಾನೇ! ಮಿಕ್ಕವರು ಮಾಡಿದಂತೆ ನಾನೂ ಮುದುಕಿಯ ಗೂಡೆ ಮುಟ್ಟದೆ ಮುಂದೆ ಹೋಗಿದ್ದರೆ........!

ಅದೆಲ್ಲ ಹಿಂದಿನ ಕತೆ!

# ಕಂಬಿ ಕಿತ್ತ ಕೃಷ್ಣಪ್ಪ !

ಕೃಷ್ಣಪ್ಪ ನಮ್ಮ ಹಳ್ಳಿಯ ಮೇಷ್ಟರು. ಅವನು ಹುಡುಗರನ್ನು ಬಹಳ ಗೋಳುಗುಟ್ಟಿಸುತ್ತಿದ್ದ. ಹಳ್ಳಿಯ ಹುಡುಗನೊಬ್ಬ "ಆಯಿತ್ವಾರ" ಎಂದರೆ "ಆದಿತ್ಯವಾರ ಎಂದು ಬೊಗಳಲು ಬಾರದು—ಓದುತ್ತಂತೆ ಇದು!" ಎಂದು ಆ ಹುಡುಗನ ಮೈ ಮೇಲೆ ಬಾಸುಂಡೆ ಎಬ್ಬಿಸುವ ಈ ಪುರುಷ! ಕೊನೆಗೆ ನಮಗೆಲ್ಲ ಸಾಕಾಗಿ ಎಷ್ಟೋ ಹೇಳಿದೆವು. "ಮಹಾರಾಯ! ನಮ್ಮೂರಿಗೆ ನೀ ಬೇಕಿಲ್ಲ" ಎಂದು. ಅದಕ್ಕೆ ಹೇಳಿದ ಕೃಷ್ಣಪ್ಪ: "ಸಾಕು ಬೇಕು ಅಂದರೆ ನಿಮ್ಮಿಷ್ಟವಲ್ಲ. ಹುಜೂರು ಸರ್ಕಾರದ ಖುಷಿ!" ಹುಜೂರು ಸರ್ಕಾರಕ್ಕೆ ಒಂದು ಅರ್ಜಿಹಾಕಿದೆವು—ನಮ್ಮ ಹಳ್ಳಿಯ ಮೇಷ್ಟರು ನಾಲಾಯಕ್ಕೆಂದು. ಅಲ್ಲಿದ್ದ ಅಧಿಕಾರಿ ಕೃಷ್ಣಪ್ಪನ ಭಾವನ ಮಗ! ನಮ್ಮ ಅರ್ಜಿ ಕಸದ ಬುಟ್ಟಿಗೆ ಬಿತ್ತು!

"ಸರ್ಗಿಕಾರ್ರಕ್ಕೆ ಹೇಳಿದರೆ ಏನೂ ಸುಖ ಇಲ್ಲ. ಇದಕ್ಕೆ ನಾವೇ ಏನಾದರೂ ಮಾಡಬೇಕು" ಎಂದ ನಮ್ಮ ತಾತ. ಮತ್ತೆ ಮನುಷ್ಯ ಬೈದು ಹೊಡೆಯುವುದಕ್ಕೆ ಯಾರು ಇಲ್ಲ ಎಂದು ನಮ್ಮ ಹುಡುಗರನ್ನು ಬಡಿದರೆ!

ಮುಂದಲ ವಾರ ಕೃಷ್ಣಪ್ಪನ ಮನೆ ಹಿತ್ತಿಲಿನಲ್ಲಿ ಬಿಗಿದಿದ್ದ ಹಸು, ಗೂಟ, ಹಗ್ಗ ಎಲ್ಲ ಗೈರ್‌ಹಾಜರ್! ಕೃಷ್ಣಪ್ಪ ಶಂಖ ಕುಟ್ಟಿದ. ಹಸು ಹೊತ್ತಿಗೆ ಪಾವೂವರೆ ಹಾಲು ಕೊಡುತ್ತಿತ್ತು!

ನಮ್ಮ ಪಕ್ಕದ ಮನೆ ಎಂಕಟ "ಬುದ್ಧಿ! ನೆನ್ನೆ ಮೋಳೆ ವೊಲದಲ್ಲಿ ಮೇಯ್ತಿತ್ತು ತಮ್ಮ ಸ" ಎಂದ. ಕೃಷ್ಣಪ್ಪ ಮೋಳೆಗೆ ಓಡಿದ. ಅಲ್ಲಿಯ ಪಟೇಲ—ನಮ್ಮ ತಾತನ ಸ್ನೇಹಿತ—ಕೃಷ್ಣಪ್ಪನನ್ನು ಕರೆದು ಹಾಲು ಕುಡಿಸಿ, ಹಣ್ಣು ತಿನ್ನಿಸಿ, ಹಸು ಹುಡುಕಲು ಆಳು ಕಳುಹಿಸಿದ. ಹೋದ ಆಳು ಸಂಜೆ ಬಂದು "ಬುದ್ಧಿ! ಅಸ ಕೆಂಗರದ ಅತ್ತರ ಇತ್ತಂತೆ" ಎಂದ. ಕೆಂಗರಕ್ಕೂ ಮೋಳೆಗೂ ಐದು ಮೈಲಿ. ಕೃಷ್ಣಪ್ಪ ಹೊರಡಬೇಕೆಂದ. ಪಟೇಲ ಬಿಡಲಿಲ್ಲ. "ರಾತ್ರೆ ಬುದ್ಧಿ! ಬೆಳಿಗ್ಗೆ ವೋಗೆವ್ರಂತೆ" ಎಂದ.

ಕೃಷ್ಣಪ್ಪ ಬೆಳಿಗ್ಗೆ ಎದ್ದು ಕೆಂಗರಕ್ಕೆ ಹೋದ. ಅಲ್ಲಿಯೂ ಅವನಿಗೆ ಹಾಲು—ತುಪ್ಪ. ಸಂಜೆವರೆಗೂ ಆಳುಗಳು ಹಸು ಹುಡುಕಿ "ಸಂಜಪುರದ ಲ್ಲೈತಂತೆ ಅಸ. ಸಂಜಪುರದ ಸೀನ ಬಂದೌನ್ವೆ" ಎಂದರು.

ಹೀಗೆಯೆ ಕೃಷ್ಣಪ್ಪ ವೋಳೆ, ಕೆಂಗರ, ಸಂಜಪುರ, ಕಾಗೆಹಳ್ಳ, ಕುಂಟನ ಕಟ್ಟೆ, ಕರಿಹೊಳೆ, ಸಂಜಾಗರ ಇಲ್ಲೆಲ್ಲ ತಿರುಗಿ, ಒಂದೊಂದು ಕಡೆ ಒಂದೊಂದು ದಿನ ತಂಗಿ, ಎಂಟನೆಯ ದಿನ ನೇರಳೆಗೆ ಬಂದ. ಅಲ್ಲಿ ಮುಖಂಡನ ಮನೆಯಲ್ಲಿ ನಮ್ಮ ತಾತ, ನಮ್ಮ ಹಳ್ಳಿಯವರು ಕೆಲವರು ನೆರೆದಿದ್ದರು.

ಕೃಷ್ಣಪ್ಪನ ಮುಖ ಕಂಡುದು ತಡ "ಏನು ಕೃಷ್ಣಪ್ಪ! ಎಲ್ಲಿ ಕಲ್ತೆ ಈ ವಿದ್ದೆ? ಮನೆ ಹಿತ್ತಿಲು ತಪ್ಸಿ ಸ್ಕೂಲಿನಲ್ಲಿ ಹಸು ಕಟ್ಟಿ, ಹಸು ಹುಡುಕುವ ನೆವದಲ್ಲಿ ಹಳ್ಳಿಹಳ್ಳೀಲಿ ಬಿಟ್ಟಿ ತಿಂಡಿ ಗಿಟ್ಟಿಸಬೇಕೆಂದು ಈ ಆಟ ಹಾಕಿದೆಯ ಕೃಷ್ಣಪ್ಪ? ಹಾರವ ಸೀನು! ಹಾರವ! ಕೇಳಿದ್ದರೆ ಗ್ರಾಮದೋರೆಲ್ಲಾ ತಲಾ ಮೂರು ಕಾಸು ಹಾಕಿ ಕೊಡುತಿರಲಿಲ್ವಾ ನಿನಗೆ—ಸಂಬಳ ಏಟಕದಿದ್ದರೆ? ಹಳ್ಳಿಯವರಗಾ ಮೋಸವಮಾಡೋದು ಸೀನು? ಛೆ!" ಎಂದು ನಮ್ಮ ತಾತ ಎಲ್ಲರೆದುರಿಗೂ ಎಂದುಬಿಟ್ಟ.

ಕೃಷ್ಣಪ್ಪನ ಮುಖ ಇಷ್ಟಾಯಿತು. ಊರಿನವರ ಮಸಲತ್ತು ಅವನಿಗೆ ಗೊತ್ತಾಯಿತು. ಇನ್ನು ಮುಂದೆ ಇನ್ನೇನಾಗಬಹುದೆಂದು ಹೆದರಿಕೆ ಆಯಿತು.

ಮಾರನೆಯ ದಿನವೇ ವರ್ಗಾಯಿಸಬೇಕೆಂದು ಮೇಲಕ್ಕೊಂದು ದಮ್ಮಯ್ಯಗುಡ್ಡೆ ಅರ್ಜಿಹಾಕಿಕೊಂಡು ಕಂಬಿ ಕಿತ್ತ ಕೃಷ್ಣಪ್ಪ!

# ಆರು ದೋಸೆ ಆರು ಇಡ್ಲಿ ಆರು ಕಾಫಿ

ದೋಸೆ ಎಂದರೆ ಮುಮ್ಮೂರು ಕಾಸು ಸಾದಾ ದೋಸೆ ಅಲ್ಲ; ಸ್ಪೆಷಲ್ ಮೋಟಾರ್ ಮಸಾಲೆದೋಸೆ, ಚಟ್ನಿ ಕಡಿಮೆ, ಡಬ್ಬಲ್ ಪಲ್ಯ! ಇಡ್ಲಿ ಎಂದರೆ ಬರಿಯ ಅಕ್ಕಿ ಇಡ್ಲಿ ಅಲ್ಲ; ರವೆ ಇಡ್ಲಿ, ಗಟ್ಟಿ ಚಟ್ನಿ, ಎರಡು ಬೆಣ್ಣೆ, ಒಂದು ಪ್ಲೇಟು ಸಾಗು! ಜತೆಗೆ ಒಂದು ಕಪ್ಪು ಕಾಫಿ—ಸ್ಪೆಷಲ್, ಸ್ಟ್ರಾಂಗು, ಹಾಲು ಕಡಿಮೆ!

ಆ ಹೊತ್ತು ಎದ್ದಾಗ ನರಿಯ ಮುಖ ನೋಡಲಿಲ್ಲ—ಹಳೆಯ ಎಕ್ಕಡ ಮಡಗಿದ್ದ ಮೂಲೆಯಲ್ಲಿ ಮೋಟು ಪರಕೆಯ ಪಕ್ಕದಲ್ಲಿ ಬೆಚ್ಚಗೆ ಬಿದ್ದಿದ್ದ ಬೆಕ್ಕಿನ ಮುಖ ಕಂಡೆ. ಅದಕ್ಕೆ ಆ ಹೊತ್ತು ಹಾಗಾದದ್ದು. ಎದ್ದು ಹೊರಟುದು ತಡ ವೆಂಕಟರಾಮು ಸಿಕ್ಕಿದ. ದೋಸೆ, ಇಡ್ಲಿ, ಕಾಫಿ ಕೊಡಿಸಿದ. ಹತ್ತು ಹೆಜ್ಜೆ ಹಾಕುವುದರೊಳಗೆ ರಂಗಣ್ಣ ಸಿಕ್ಕಿದ. ಅವನದೂ ದೋಸೆ ಇಡ್ಲಿ ಕಾಫಿ ಕೈಂಕರ್ಯ. ಹೀಗೆ ಹತ್ತು ಹತ್ತು ನಿಮಿಷಕ್ಕೆ ಒಬ್ಬೊಬ್ಬನಂತೆ ಆರು ಜನ ಸಿಕ್ಕಿದರು. ಎಲ್ಲರೂ ಸ್ನೇಹಿತರೇ. ಎಲ್ಲರ ನೈವೇದ್ಯವೂ ದೋಸೆ, ಇಡ್ಲಿ, ಕಾಫಿ. ಬೆಳಿಗ್ಗೆ ಎಂಟು ಗಂಟೆಗೆ ಮನೆ ಬಿಟ್ಟವನಿಗೆ ಒಂಭತ್ತೂವರೆಯ ವೇಳೆಗೆ ಆರು ದೋಸೆ ಆರು ಇಡ್ಲಿ ಆರು ಕಾಫಿ ಹೊಟ್ಟೆಗೆ ಬಿದ್ದಿತ್ತು.

ಹತ್ತು ಗಂಟೆಗೆ ಮನೆಗೆ ತೂರಾಡುತ್ತ ಹೋದೆನಂತೆ. ಹಾಸಿಗೆ ಹಾಸಿ ಮಲಗಿದೆನಂತೆ. ಹನ್ನೊಂದರಿಂದ ಒಂದು ಗಂಟೆಯವರೆಗೂ ಊರು ಹೊಲಗೇರಿ ಒಂದು ಮಾಡುತ್ತ ಸಾವಿರ ಕಾಲು ಒದ್ದಾಡುವಂತೆ ಒದ್ದಾಡುತ್ತಿದ್ದೆನಂತೆ. ಒಂದೂವರೆ ಗಂಟೆಗೆ ಘಟ ಸುಮ್ಮನಾಗಿ ಇರುವೆ ಮುಲುಗಿದ ಹಾಗೆ ಮುಲುಗುತ್ತಿತ್ತಂತೆ. ಬಟ್ಟೆ ಹಿಂಡುವ ಹಾಗೆ ಹೊಟ್ಟೆ ಹಿಂಡುತ್ತಿದ್ದೆನಂತೆ. ಮನೆಯವರಿಗೆಲ್ಲ ಗಾಬರಿಯಾಗಿ ಉಪ್ಪು ನಿವಾಳಿಸಿದರಂತೆ, ಕಾಲು ಧೂಳು ತೆಗೆದರಂತೆ, ನೆಟಿಕೆ ಮುರಿದರಂತೆ, ಹೆಂಚಿಕಡ್ಡಿ ಸುಟ್ಟರಂತೆ, ಮುಖಕ್ಕೆ ಮೆಣಸಿನಕಾಯಿ ತೆಗೆದರಂತೆ, ಹೊಟ್ಟೆಗೆ ಬೆಂಬೂದಿ ಬಳಿದು

ಬಿಸಿನೀರಿನ ಬುಡ್ಡಿ ಒತ್ತಿದರಂತೆ, ಕಡೆಗೆ ಏಳೆಂಟು ಕವಚ ಕೂಡ ಹೇಳಿದ ರಂತೆ. ಏನು ಮಾಡಿದರೂ ಮುಲುಗುಟ್ಟುವುದು ನಿಲಲಿಲ್ಲವಂತೆ. ಅಷ್ಟ ರಲ್ಲಿ ಮೂರು ಘಂಟೆಯಿದ್ದ ಗಡಿಯಾರದಲ್ಲಿ ಆರು ಗಂಟೆಯಾಯಿತಂತೆ. ಕಡೆಗೆ ಡಾಕ್ಟರನ್ನು ಕರೆತರಲೇ ಎಂದರಂತೆ. ಹೂಂ ಎಂದೆನಂತೆ. ಡಾಕ್ಟರು ಬಂದನಂತೆ. ನಾಲಿಗೆ ನಾಡಿ ನೋಡಿ ಏನೋ ಕೊಟ್ಟನಂತೆ. ರಾತ್ರಿ ಎಂಟುಗಂಟೆಗೆ ಬಂದ ನಿದ್ರೆ ಬೆಳಿಗ್ಗೆ ಎಂಟುಗಂಟೆಗೆ ಹರಿಯಿತಂತೆ.

ಬೆಳಿಗ್ಗೆ ಎಂಟು ಗಂಟೆಗೆ ಡಾಕ್ಟರಿನ "ಬಿಲ್ಲು" ಬಂತಂತೆ. ಬಿಲ್ಲಿನಲ್ಲಿ ಮನೆಗೆ ಬಂದುದಕ್ಕೆ ಐದು ರೂಪಾಯಿ, ಔಷಧಕ್ಕೆ ಎಂಟಾಣೆ ಎಂದಿತ್ತಂತೆ. ನನಗೆ ಆ ಬಿಲ್ಲನ್ನು ತೋರಿಸಿದರಂತೆ.

ನನಗೆ ಮೂರ್ಛೆ ಬಂತಂತೆ!

## ತಣ್ಣಗಾಯ್ತು!

ಮೈಸೂರು,
೧೪–೧–೩೦.

ಸುಬ್ಬು,

ನಿನ್ನ ಕಾಗದ ಬಂತು. ಮದರಾಸಿನಲ್ಲಿ ಬಹಳ ಗಲಾಟೆ ಎಂದಿದ್ದೀಯೆ. ಹುಷಾರಾಗಿರು. ಉದ್ದುದ್ದ ಕಾಗದ ಬರೆಯಬೇಕು ಎನ್ನುತ್ತೀಯೆ. ಬರೆಯುವುದಕ್ಕೆ ವಿಷಯವೇ ಇಲ್ಲ. ಈ ದಿನ ರಾಮುವಿಗೆ ಶಾಂತಿಪ್ರಸ್ಥ. ಇನ್ನೇನು ಬರೆಯಲಿ? ಬರೆಯುವುದಕ್ಕೆ ಬೇಜಾರಾಗುತ್ತದೆ. ಇನ್ನೇನೂ ಇಲ್ಲ. ರಾಮು ಎಂದಿನ ಹಾಗೆ ಪಿಶಾಚಿ ಹಿಡಿದಂತೆ ಓದುತ್ತಿದ್ದಾನೆ. ರಾತ್ರೆಯೆಲ್ಲ ನಿದ್ರೆಯಿಲ್ಲದೆ ಯಾತಕ್ಕೆ ಇಷ್ಟು ಕಷ್ಟಪಡುತ್ತೊ ಪ್ರಾಣಿ!

ಇಷ್ಟೆ. ನಾಳೆ ಬೇರೆ ದೊಡ್ಡ ಕಾಗದ ಬರೆಯುತ್ತೇನೆ. ನೀನೂ ಬರೆ.

ನಾಣಿ.

*       *       *       *       *

ಮೈಸೂರು,
೨೬–೪–೩೦.

ಸುಬ್ಬು,

ನಿನ್ನ ಕಾಗದಗಳೆಲ್ಲ ಮೇಜಿನ ಮೇಲೆ ಗುಡ್ಡೆಬಿದ್ದಿವೆ. ನನಗೆ ಇದುವರೆಗೆ ನಿನಗೆ ಬರೆಯುವುದಕ್ಕೆ ಪುರಸೊತ್ತಾಗಲಿಲ್ಲ. ಈಗ ಸದ್ಯ ಪರೀಕ್ಷೆಯ ಬ್ರಹ್ಮೇತಿ ಕಳೆದು ಕೊಂಚ ಹಾಯಾಗಿದೆ. ನಿನ್ನ—ಹದಿನೈದು ಕಾಗದಗಳಲ್ಲಿ ಇರುವುದು ಒಂದೇ ಪ್ರಶ್ನೆ. ನಾನು ಏಕೆ ಇಷ್ಟು ಕಷ್ಟಪಟ್ಟು ಓದಿದೆನೆಂದು ನಿಮಗೆಲ್ಲ ಆಶ್ಚರ್ಯವಲ್ಲವೆ!.... ಹೌದು, ಮೆಡಲಿಗೆ. ಒಂದಲ್ಲ, ನಾಲ್ಕು. ನನಗೆ ನಾಲ್ಕೂ ಬರುತ್ತದೆ ಖಂಡಿತ. ಈಗ ಹತ್ತು ತಿಂಗಳು ಓದುವುದರಲ್ಲಿ ೩೬ ಪೌಂಡು ಇಳಿದುಹೋಗಿದ್ದೇನೆ!

ಇಷ್ಟು ಒದ್ದಾಡಿದುದೂ ಏತಕ್ಕೆ ಎನ್ನುವಿಯೋ—ಕೇಳು. ನನಗೆ ಈ

ಪದಕಗಳಿಂದ ಬರುವ ಗೌರವಬೇಕಾಗಿಲ್ಲ. ಇದನ್ನು ನೋಡಿ ನನಗೆ ಯಾರೂ ಕೆಲಸ ಕೊಡಬೇಕಾಗಿಲ್ಲ. ನಮ್ಮಪ್ಪನ ಆಸ್ತಿ ನೋಡಿಕೊಂಡರೇ ಬೇಕಾದಷ್ಟಾಯಿತು ನನಗೆ. ನನ್ನ ಗುರಿ ಇಷ್ಟು—ನಾನು ಪದಕ ಗಿಟ್ಟಿಸಬೇಕು. ರೋಜೀನ ಕಾನ್ವೊಕೇಷನ್ನಿಗೆ ಕರೆದುಕೊಂಡು ಹೋಗಬೇಕು. ಅಲ್ಲಿ "ರಾಮಸ್ವಾಮಿ, ತಿರುಮಲಾಪೂರ್" ಎಂದು ಕೂಗಿದಾಗ ಮಹಾರಾಜರು ನಗುನಗುತ್ತ ಮೆಡಲ ಮೇಲೆ ಮೆಡಲು ನನ್ನ ಮಡಿಲಿಗೆ ತುಂಬಿದಾಗ....ಅದನ್ನು ರೋಜಿ ನೋಡಬೇಕು. ಇಷ್ಟಕ್ಕೇ ನೋಡು, ನಾನು ಅಷ್ಟು ಒದ್ದಾಡಿದುದು. ಗೊತ್ತಾಯಿತೆ ಈಗ!

ಇನ್ನು ನಿನ್ನ ವಿಚಾರ. ನೀನೇನೂ ಬರೆದಿಲ್ಲ. ಈ ಕಾಗದ ನೋಡಿದ ಕೂಡಲೆ ನೀನು ಎಲ್ಲಾ ವಿಶದವಾಗಿ ಬರೆಯಬೇಕು. ಅಲ್ಲಿಯವರೆಗೆ ನಾನು ನಿನಗೆ ಬರೆಯುವುದಿಲ್ಲ. ರಾಮು.

**ಮೇಲುಮಾತು :**—ಈ ಕಾಗದ ನಿನಗೆ ತಲಪುವ ವೇಳೆಗೆ ನಾನೇ ಶಿವಮೊಗ್ಗೆಗೆ ಬಂದರೂ ಬಂದೆ. ಅಂತೂ ನಾಡಿದ್ದು ಸ್ಟೇಷನ್ನಿನ ಹತ್ತಿರ ಬಂದಿರು. ರಾಮು.

* * * * *

ಮೇ ತಿಂಗಳ ಕೊನೆಗೆ ಪರೀಕ್ಷೆಯ ಫಲಿತಾಂಶ ಬಂದಿತು. ರಾಮು "ಡಬ್ಬಲ್ ಫಸ್ಟ್‌ಕ್ಲಾಸ್!" ಜತೆಗೆ ನಾಲ್ಕು ಪದಕಗಳು! ಎರಡು ಬಹುಮಾನ!

* * * * *

ಅಕ್ಟೋಬರ್ ಹದಿನಾರಕ್ಕೆ "ಕಾನ್ವೊಕೇಷನ್."

ಹದಿನಾಲ್ಕನೆಯ ತಾರೀಖು ರಾಮು ಬೊಂಬಾಯಿ ದೆಹಲಿ ಕಡೆ ನಾಲ್ಕು ತಿಂಗಳು ಪ್ರವಾಸಹೋಗಿದ್ದವನು ಮೈಸೂರಿಗೆ ಬಂದ. ಅದೇ ಸಂಜೆ ಕಾನ್ವೊಕೇಷನ್ನಿಗೆ ಹೆಂಡತಿಯನ್ನು ಕರೆತರಬೇಕೆಂದು ನಂಜನಗೂಡಿಗೆ ಹೋದ.

ನಂಜನಗೂಡಿನಲ್ಲಿ ರೈಲು ಇಳಿಯುವುದು ತಡ, ಅವನ ಭಾವ ಶೇಷಗಿರಿ "ರಾಮು! ರೋಜೀಗೆ ಒಂದು ಮಗು!....ಗಂಡು!....ನೆನ್ನೆ ರಾತ್ರಿ!" ಎಂದು ಉಕ್ಕುತ್ತ ಹೇಳಿದ.

ತಣ್ಣಗಾಯ್ತು!

# ಕಾಪಿ ಹೋಟಲು ನಿಂಗವ್ವ

ಕಾಪಿ ಹೋಟಲು ನಿಂಗವ್ವನನ್ನು ನೋಡಬೇಕಾದರೆ ಅವಳು ದೋಸೆ ಹುಯ್ಯುವಾಗ ನೋಡಬೇಕು. ಕರಿಯ ಕಾವಲಿ....ಗುಂಡು ಗುಂಡಿಗೆ ಬಿಳಿಯ ದೋಸೆ....ರುದ್ರಾಕ್ಷಿ ಅಂಚಿನ ಹಳದಿ ಸೀರೆ....ಹಣೆಯ ವಿಭೂತಿ ....ಕೊರಳ ಕರಡಿಗೆ—ಹೇಳಿ ಸುಖವಿಲ್ಲ ನೋಡಬೇಕು.

ಒಂದು ದಿನ ವೀರಭದ್ರಯ್ಯನೆಂಬವನು ಆ ಹೋಟೆಲಿಗೆ ಬಂದು ಅಲ್ಲ ದೋಸೆ ಹುಯ್ಯುತ್ತಿದ್ದ ನಿಂಗವ್ವನನ್ನು ಕಂಡನು. ಕಂಡು ದಿನವೂ ಕಾಣಲು ಬರುತ್ತಿದ್ದನು. ಅವನನ್ನು ಕಂಡಾಗ ನಿಂಗವ್ವನ ಕಣ್ಣುಗಳು ಅರಲಿದ ಮಲ್ಲಿಗೆಯಲ್ಲಿ ತಿಂಗಳ ತುಣುಕನ್ನು ಇಟ್ಟಂತಾಗುತ್ತಿದ್ದುವು. ಆದರೆ ಭ್ರಮರಕ್ಕೆ ಪುಷ್ಪವಿಲೋಕನ ಮಾತ್ರವಲ್ಲದೆ ಬಂಡುಣಲಾಗಲಿಲ್ಲ.

ವೀರಭದ್ರಯ್ಯನಿಗೆ "ಮೆಟಮಾರ್ಫಸಿಸ್" ಎನ್ನುವ ರೂಪಭೇದ ವಕ್ರಿಸಿಕೊಂಡು ಕುಂಬಳಕಾಯಿಸಂತಿದ್ದವನು ಸೌತೆಕಾಯಾದ. ಸೌತೆಯು ಕಾಯಿ ಈರನಗೆರೆ ಬದನೆಯು ಕಾಯಾಯಿತು. ಬದನೆಯಕಾಯಿ ಹಂಚಿಕಡ್ಡಿಯಾಗಿ, ಕಡೆಗೆ ಹಂಚಿಕಡ್ಡಿಯು ಕೂದಲೆಳೆಯಾಯಿತು. ಕೂದಲೆಳೆಯು ಬರಬರುತ್ತ ಸುರುಟಿಕೊಂಡು ಸುರುಳಿ ಸುತ್ತಿಕೊಂಡಿತು.

ಆ ಸುರುಟಿಕೊಂಡ ಕೂದಲನ್ನು ನಾಲ್ಕು ಜನ ಹೆಗಲಮೇಲೆ ಹೊತ್ತು ಕ್ಕೊಂಡು ಹೋಗುತ್ತಿರುವಾಗಲೂ ಯಾವುದನ್ನೂ ಮನಸ್ಸಿಗೆ ಹಚ್ಚಿ ಕೊಳ್ಳದೆ ದೋಸೆ ಹುಯ್ಯುತ್ತಿದ್ದ ಸಿಂಗವ್ವನನ್ನು ಯಾರೋ ಕೇಳಿದರು. "ಏನು ನಿಂಗವ್ವ! ಸಿಂಗಪ್ಪು ನೋಡ್ತಿದ್ದ—ಯೀರಬದ್ರಪ್ಪ. ಅವನೋ ಗ್ಬುಟ್ರೂವೆ ದೋಸೆ ಉಯ್ತಿದ್ದೀಯಲ್ಲ ನೀನು!" ಎಂದು.

"ದೀಪದತ್ರ ವುಳ ಬಂದು ರೆಕ್ಕೆ ಸುಟಕೊಂಡು ಸತ್ತರೆ ದೀಪಾನೇನು ಮಾಡಬೇಕೂಂತೀಯಾ?" ಎಂದು ಸಿಂಗವ್ವನೆಂದಳು.

*

# ....ಆ ಮೇಲೆ?

ಒಂದು ಸಲ ಪ್ರವಾಸ ಹೊರಟಾಗ ಚಿಲ್ಲರೆ ಕೆಲಸಕ್ಕಿರಲೆಂದು ಬೋರ ನನ್ನೂ ಜತೆಯಲ್ಲಿ ಕರೆದುಕೊಂಡು ಹೋದೆ. ಹೋಗುತ್ತ ದಾರಿಯಲ್ಲಿ ಬಳಗೊಳದಲ್ಲಿಳಿದು ಕನ್ನಂಬಾಡಿಗೆ ಹೋಗಿ ಕಟ್ಟೆಯ ಮೈಯಲ್ಲಿರುವ ಕಾವೇರಿ ವಿಗ್ರಹವನ್ನು ದರ್ಶಿಸಿ ಪೂಜಾರಿ ಕೊಟ್ಟ ಪ್ರಸಾದವನ್ನು ತಲೆಬಾಗಿ ಸ್ವೀಕರಿಸಿದೆವು....

ಇದಾದ ಮೂರು ದಿನಕ್ಕೆ ಬೇಲೂರಿಗೆ ಬಂದೆವು. ಅಲ್ಲಿ ಬೋರ ಬಂದು "ಬುದ್ದಿ! ಒಂದು ಡಬ್ಬಿ ಅಪ್ಪಣೆ ಆಗಬೇಕು" ಎಂದ.

"ಯಾಕೊ? ನಶ್ಯಕ್ಕೇನೊ?"

"ಅಲ್ಲ ಬುದ್ದಿ! ಕಟ್ಟ್ಯಾಗ ಊವಾ ಕೊಟ್ಟರಲ್ಲ, ಅದು ಚಂಡಿಕೆ ಯಾಗ ನಿಲ್ಲೋಲ್ಲ. ಅದಕ...."

"ಪೆಚ್ಚ! ಆ ಒಣಕಲು ಹೂ ಇನ್ನೂ ಇಟ್ಟುಕೊಂಡಿದ್ದೀಯಾ! ಅದಕ್ಕೆ ಯಾಕೊ ಡಬ್ಬಿ?"

"ಅಲ್ಲ ಬುದ್ದಿ! ನಮ್ಮ ಸರಗೂರಾಗ ನೀರಿಗೆ ಎಷ್ಟು ಅವಸ್ತೆ ತಮಗ್ಗೊತ್ತಿಲ್ವಾ! ಊರ ಕೊಳದಾಗ ಹಸಾಕರಾಕ್ಕೂಡಾ ಕುಡಿ ಯೋಕ್ಕಹಿತ ನೀರ್ನಹಾ ಇಲ್ಲ....ಅದಕ....ಕಾವೇರಮ್ಮ ಕಟ್ಟೇಹಿಂದ ಆಪಾಟಿ ನೀರು ಇಟ್ಟುಕೊಂಡವಳಲ್ಲ....ಅದಕ.... ಈ ಪಸಾರ್ದ ಮಡೀ ಕೊಂಡು ಊರಿಗೋಗೋತ್ಲೂನೆ ನಮ್ಮ ಸರಗೂರು ಕೆರೆಗಾಕಿಬಿಡ್ತೀನಿ. ಕೆರೆ ತುಂಬ ನೀರುಬುಡ್ತಾಳೆ ಕಾವೇರಮ್ಮ....ಇದು ಅವಳ ಪಸಾರ್ದ ಅಲ್ವಾ....ಅದಕ....ಆಗ ಹಸಾಕರಾಗೆ ಬೇಕಾದಂಗೆ ನೀರು ಸಿಕ್ತದೆ.... ಅದಕ...."

ಬೋರನ ಮುಗ್ಧತೆ ನೋಡಿ ನನಗೆ "ಅಯ್ಯೋ" ಎನಿಸಿತು. ಅವನಿಗೆ ವಯಸ್ಸೇನು ಕಡಿಮೆಯಿಲ್ಲ. ಅವನ ಮನಸ್ಸಿರುವುದು ಸ್ವಾರ್ಥದಲ್ಲಲ್ಲ— ನೀರಿಲ್ಲದೆ ಪರದಾಡುತ್ತಿರುವ ಮೂಗುಪ್ರಾಣಿಗಳ ಮೇಲೆ. ಆದರೆ....?

ಡಬ್ಬಿಯೇನೊ ಕೊಟ್ಟೆ....

ಇನ್ನಾರು ದಿವಸಕ್ಕೆ ಸರಗೂರು ಮುಟ್ಟುತ್ತೇವೆ. ಬೋರ ತನ್ನ ಪ್ರಸಾದದ ಮಹತ್ವದಿಂದ ಕಾವೇರಿಯನ್ನು ತನ್ನ ಊರಿನ ಕೆರೆಗೆ ಒಲಿಸುತ್ತೇನೆಂದಿದ್ದಾನೆ. ಪ್ರಸಾದವನ್ನು ಜೋಪಾನವಾಗಿ ಹಳ್ಳಿಗೆ ಒಯ್ಯುತ್ತಾನೆ....ದೃಢವಾದ ನಂಬಿಕೆಯಿಂದ ಕೆರೆಗೂ ಚೆಲ್ಲುತ್ತಾನೆ.... ಆ ಮೇಲೆ?....ಆ ಮೇಲೆ?....

# ಹಳ್ಳಿಯುವಳು

ನಾನು ಮಲ್ಲನಬೋರೆಗೆ ಜಮಾಬಂದಿಗಾಗಿ ಹೋಗಿದ್ದಾಗ ಒಂದು ವಿಷಯ ನಡೆಯಿತು.

ನಾನು ಅಲ್ಲಿ ತಂಗಿದಾಗ ಅಲ್ಲಿಯವರಲ್ಲಿ ಇಬ್ಬರು ನನ್ನ ಕೆಲಸಕ್ಕೆ ನಿಂತರು. ಒಬ್ಬಳು ಮುದುಕಿ, ಇನ್ನೊಬ್ಬನು ಅವಳ ಮಗ. ಇಬ್ಬರೂ ಒಬ್ಬರನ್ನೊಬ್ಬರು ಅಗಲದೆ ಜತೆಯಾಗಿಯೇ ಕೆಲಸಮಾಡುತ್ತಿದ್ದರು. ತಾಯಿಯು ಮಗನಿಂದ ಏನನ್ನೋ ನಿರೀಕ್ಷಿಸುತ್ತಿರುವಂತೆ ಹಗಲೆಲ್ಲಾ ಇರುತ್ತಿದ್ದಳು.

ನಾನು ಹೋದ ಮಾರನೆಯ ದಿನ ತಂದಿದ್ದ ಹಾಲು ಚೆಲ್ಲಿಹೋಯಿತು. ಅದಕ್ಕಾಗಿ ಆ ಹುಡುಗನನ್ನು ಹಾಲು ತರಲು ಕಳುಹಿಸಿದೆ. ಹುಡುಗನು ಹೊರಟುದು ತಡ—ಮುದುಕಿಯು "ಶತಾಯುಸ್, ವಜ್ರಾಯುಸ್, ದೀರ್ಘಾಯುಸ್, ಶತಾಯುಸ್, ವಜ್ರಾಯುಸ್, ದೀರ್ಘಾಯುಸ್" ಎಂದು ಸರಂಪರೆಯಾಗಿ ಜಪಿಸುತ್ತ ಕೆಲಸಮಾಡತೊಡಗಿದಳು. ನಾನು ಮಾತನಾಡಿಸಿದರೆ ಅದನ್ನು ಕಿವಿಗೆ ಹಾಕಿಕೊಂಡು ಕೆಲಸ ನಡಿಸಿದಳಲ್ಲದೆ ಜವಾಬು ಕೊಡಲಿಲ್ಲ. ಜತೆಗೆ ಯಾರಿಲ್ಲದಿದ್ದರೂ ತಾನೊಬ್ಬಳೇ ಗೊಣಗುತ್ತಿದ್ದುದನ್ನು ಕಂಡು ಇವಳಿಗೇನು ಹುಚ್ಚೋ ಎನ್ನಿಸಿತು. ಆದರೂ ಹೇಳಿದ ಕೆಲಸ ಸರಿಯಾಗಿ ಮಾಡುತ್ತಿರುವವರೆಗೆ ನನಗೇನು ಎಂದು ಸುಮ್ಮನಾದೆ.

ಅರ್ಧ ಗಂಟೆಯಾದ ಮೇಲೆ ಆ ಹುಡುಗ ಹಾಲು ತಂದು ತಾಯ ಬಳಿ ನಿಂತ. ಅವಳ ಜಪ ನಿಂತಿತು.

ಹೀಗೆಯೆ ಇನ್ನೂ ನಾಲ್ಕೈದು ಸಲ ಹುಡುಗನು ಮರೆಯಾದಾಗ ಅವಳು ತನ್ನ "ಶತಾಯುಸ್" ಜಪವನ್ನು ಪ್ರಾರಂಭಿಸುವಳು. ಅವನು ಕಣ್ಣೆದುರಿಗಾದರೆ ಸುಮ್ಮನಾಗುವಳು. ಹೀಗಾಗಿ ಅದಕ್ಕೆ ಕಾರಣವನ್ನು ಅವಳನ್ನೇ ಕೇಳಿದೆ.

ಮುದುಕಿಗೆ ಯಾರೋ ಹೇಳಿದ್ದರಂತೆ—ಮಕ್ಕಳು ಸೀಂತಾಗ "ಶತಾ
ಯುಸ್, ವಜ್ರಾಯುಸ್, ದೀರ್ಘಾಯುಸ್" ಎನ್ನದೆ ಹೋದರೆ ಆ
ಮಕ್ಕಳ ಆಯುಷ್ಯವು ಕಡಿಮೆಯಾಗುವುದೆಂದು. ಅದರಿಂದ ಮುದುಕಿಯು
ಮಗನು ಕಣ್ಮರೆಯಾದಾಗ ಯಾವಾಗ ಸೀಂತಾನೋ, ಅವನು ಸೀಂತಾಗ
ಯಾರಾದರೂ "ಶತಾಯುಸ್" ಎನ್ನುವರೋ ಇಲ್ಲವೋ, ಎನ್ನದಿದ್ದಲ್ಲಿ
ಅವನ ಆಯುಷ್ಯವು ಕಡಿಮೆಯಾಗುವುದೋ ಏನೋ ಎಂದು ಅಳುಕಿ
ಅವನು ಮರೆಯಾದಾಗಲೆಲ್ಲ ರಕ್ಷಣಾರ್ಥವಾಗಿ ತಾನೆಯೆ ಹೇಳುತ್ತಿದ್ದ
ಳಂತೆ !

ಮೌಢ್ಯದಂತೆ ಕಾಣುತ್ತಿದ್ದ ಅವಳ ನಂಬಿಕೆಗೆ ಎದ್ದ ನನ್ನ ನಗುವು
ಅವಳ ತಾಯ್ತನದ ಮೋಹಕ್ಕೆ ಉಂಟಾದ ಮೆಚ್ಚುಗೆಯಲ್ಲಿ ಹುಟ್ಟಡಗಿ
ಹೋಯಿತು !

# ಗವಾರ

ನಮ್ಮ ಹಳ್ಳಿಯ ಬೋರನನ್ನು ನಾವು ಪಟ್ಟಣವಾಸದವರು "ಗವಾರ" ಎನ್ನುತ್ತಿದ್ದೆವು. ಬೋರನಿಗೆ "ಗವಾರ" ಎಂಬುದೇ ಸಿದ್ಧಿಸಿದ ಹೆಸರಾಗಿತ್ತು.

ಒಂದು ಸಲ ಬೋರನನ್ನು ಕಟ್ಟಿಕೊಂಡು ತೆಂಗಿನ ತೋಪಿಗೆ ಹೋಗಬೇಕಾಯಿತು. ತೆಂಗಿನ ಗಿಡಗಳಲ್ಲಿ ಕಾಯಿ ಕೀಳಿಸಬೇಕಿತ್ತು. ಆದರಲ್ಲಿ ಒಂದು ಗಿಡ ಮುಗಿಲಿನ ಮುಕ್ಕಾಲಿಗೆ ಏರಿತ್ತು. ಬೋರನ ಮಗ ಅದನ್ನು ಹತ್ತಿದ. ಆಳನ್ನೂ ಅವನು ಹತ್ತಲಿದ್ದ ಗಿಡವನ್ನೂ ನೋಡಿ "ಬೋರ! ಜೋಪಾನವಾಗಿ ಹತ್ತುವ ಹಾಗೆ ಹೇಳು ಅವನಿಗೆ" ಎಂದೆ.

"ಅದೇನೂ ಹೇಳಬೇಕಾಗಿಲ್ಲ ಬಿಡಿ ಸೋಮಿ!" ಎಂದ.

ನನಗೆ ಮುಖ ಮುರಿದ ಹಾಗಾಯಿತು. ಎಷ್ಟಾದರೂ "ಗವಾರ" ಎಂದುಕೊಂಡು ಸಂತೈಸಿಕೊಂಡೆ.

*   *   *   *   *

ಮೊನ್ನೆ ಮನೆಯ ಕೈಯಾಡಿಸಬೇಕಾಯಿತು. ಹಳ್ಳಿ ಮನೆಯ ಹೆಂಚು ಸೂರು, ನಡೆದರೆ ತಲೆ ತಾಕುವ ಸೂರು. ಆ ಕೆಲಸಕ್ಕೂ ಬೋರನೂ ಅವನ ಮಗನೂ ಬಂದರು.

ಹುಡುಗ ಸೂರು ಹತ್ತುತಿರುವಾಗ ಬೋರ "ಎಲ್ಲಾರಾ ಬಿದ್ದುಗಿದ್ದೀಯ ಮೊಗ! ವಸಿ ನೋಡಿಕೊಂಡು ಹತ್ತು" ಎಂದ.

ನನಗೆ ತೆಂಗಿನ ತೋಟದಲ್ಲಿ ಅವನು ಮುಖ ಮುರಿದುದು ನೆನಪಾಯಿತು.

"ಬೋರ! ಅಷ್ಟಲ್ಲದೆ ನಿನ್ನನ್ನು ಗವಾರ ಎನ್ನುತ್ತಾರೆಯೆ! ತೆಂಗಿನ ಗಿಡ ಹತ್ತುವಾಗ ಹುಷಾರು ಹೇಳದೆ ಹೆಂಚಿನ ಸೂರು ಹತ್ತುವಾಗ ಹೇಳುತ್ತೀಯಲ್ಲ! ನಿನ್ನ ಬುದ್ಧಿಯೊ! ನೀನೊ!" ಎಂದೆ.

ಬೋರನ ಮುಖ ಭಾವವಿಹೀನವಾಗಿತ್ತು.

“ ನೀವೇನಾರ ಹೇಳಿ ಸೋಮಿ. ನಾನನಕ ಗಮಾರ. ಆದರೆ ನನಗೆ
ಷ್ಟು ಗೊತ್ತು. ತೆಂಗಿನ ಗಿಡ ಎತ್ತರ ಇದೆ ಅಂತ ಹತ್ತೋವನು ಹುಷಾ
ಾಗಿಯೇ ಹತ್ತಾನೆ. ಸೂರು ಒಲೆ ಕೆಳಗದೇಂತ ಬೇಹುಷಾರಾಗಿ
ತ್ತಾನೆ. ಬೇಹುಷಾರಾಗೋಗುವಾಗ ತಾನೆ ಬುದ್ಧಿ, ಬುದ್ವಾದ ಹೇಳ
ೇಕಾದರೆ ? ” ಎಂದ.

ನನ್ನ ತುಟಿ ಮುಚ್ಚಿತು. ಕಣ್ಣು ತೆರೆಯಿತು.

# ಯುನೀಕಸ್ತ್ರ

ನಮ್ಮ ಸೀನಿ ಪುರೋಹಿತನಾಗಬಾರದಿತ್ತು. ಅವನಿಗೆ ಸರಿಯಾದ ಕೆಲಸವೆಂದರೆ ಮಟ್ಟಿಗಿಳಿದು ಕುಸ್ತಿಮಾಡುವುದು. ಅವನು ಪುರೋಹಿತನಾಗಬಾರದಿತ್ತು. ಆದರೆ ದುಡ್ಡು ಹಾಳುಮಾಡಿಕೊಂಡು 'ಎಮ್ಮೆ' ಯಾದ. ಕಾಸು ಹುಟ್ಟಲಿಲ್ಲ. "ಈ ಕಾಲದ ಓದಿನಿಂದ ಏನೂ ಪುರುಷಾರ್ಥವಿಲ್ಲ" ಎನ್ನುವ ಪರಮಾರ್ಥ ಅರ್ಥವಾಯ್ತು. ಕಣ್ಣು ಮುಚ್ಚಿಕೊಂಡು ಸೆಟ್ಟಿಗೆ ಹೋಗಿ ಅಪ್ಪ ಹಾಕಿದ ಆಲದ ಮರಕ್ಕೆ ನೇತುಹಾಕಿಕೊಂಡ.

ಮೊನ್ನೆ ಅವನ ಮನೆಗೆ ಸೌದೆ ಮಾರುವವನೊಬ್ಬ ಬಂದಿದ್ದ. ಅವನು ಪಾವಲಿ ಹೇಳಿದ ಸೌದೆಯನ್ನು ಸೀನಿ ಎರಡು ದುಡ್ಡಿಗೆ ಕೇಳುತ್ತಿದ್ದ. ಹೀಗೆಯೇ ಚೌಕಾಸಿ ಮಾಡುತ್ತ ಮಾತಿಗೆ ಮಾತು ಬೆಳೆಯಿತು. ಸೀನಿಗೆ ಕೊಂಚ ಮುಂಗೋಪ.

ಸೀನಿ ಸೌದೆಯವನ ಮೇಲೆ ರೇಗಿ "ದವಡೆ ಹಲ್ಲು ಉದುರಿಸಿಬಿಟ್ಟೇನು!" ಎಂದ.

ಸೌದೆಯವನು "ಉದುರಿಸಿಬಿಟ್ಟರೆ ನಮ್ಮ ಕೈ ಕಳ್ಳೆಪುರಿ ತಿನ್ನುತಿರತ್ತೈತೆ!'' ಎಂದ.

"ಏನು ಮಾಡುತ್ತೀಯೊ?" ಎಂದು ಸೀನಿ ತಾನು ಹೊದ್ದಿದ್ದ ಪಂಚೆ ಜಾರಿಸಿದ.

ಸೌದೆಯವನು ಅವನ ಮೈ ನೋಡಿಬಿಟ್ಟು "ಹುಂ! ಹಲ್ಲು ಉದುರಿಸಿಬಿಟ್ಟರೆ ಕೋರ್ಟಿಲ್ವೇನೊ!'' ಎಂದ.

ಸೀನಿ ಕೊಂಚ ಸಮಾಧಾನ ತಂದುಕೊಂಡು "ಅಲ್ಲವೊ! ನಾನು ನಿನ್ನ ಹಲ್ಲು ಉದುರಿಸಿಬಿಡುತ್ತೇನೆ. ನೀನು ಕೋರ್ಟಿಗೆ ಹೋಗುತ್ತೀಯೆ. ಏನು ನನಗೆ ಜುಲ್ಮಾನೆ ಹಾಕುತ್ತಾರೇನೊ? ಜೈಲಿಗೆ ಹಾಕುತ್ತಾರೇನೊ? ಹಾಕಲೇಳು. ನಿನ್ನ ಉದುರಿದ ಹಲ್ಲು ಬಂತೋ ನಿನಗೆ? ನಾನು ಕೊಟ್ಟ ಏಟಿನ ನೋವು ಹೋಯಿತೊ ನಿನಗೆ?" ಎಂದ.

ಹುಳ್ಳಿಯುವನು “ ಏನೊ ಈ ಮಾತಿನಲ್ಲಿ ಸ್ವಾರಸ್ಯ ಇದೆ ” ಎನ್ನುವವನ ಹಾಗೆ ನಿಂತ.

ಸೀನಿ ಇದೆ ಸಮಯ ಎಂದುಕೊಂಡು “ ಹಲ್ಲು ಬಂತೇನೊ ? ನೋವು ಹೋಯ್ತೇನೆ ? ” ಎಂದು ಕಿರಿಚಿಕೊಂಡ.

ಸೌದೆಯುವನು ತಲೆ ಕೆರೆದುಕೊಳ್ಳುತ್ತ ತುಟಿಪಿಟಿಕ್ಕೆನ್ನದೆ ಎರಡು ದುಡ್ಡಿಗೇ ಸೌದೆ ಹಾಕಿಬಿಟ್ಟ.

ನಾನು ಅದನ್ನು ನೋಡಿ “ ಸೀನಿ ! ಒಳ್ಳೇ ಅಸ್ತ್ರ ಹಿಡಿದೆ. ಬಲೆ ‘ ಯುನೀಕಾ ’ ಗಿದೆ ! ನಾನೇನಾದರೂ ಭಾರತಗೀರತ ಬರೆಯುವ ಪ್ರಮೇಯ ಬಿದ್ದರೆ ಇರುವ ಗರುಡಾಸ್ತ್ರ ಮುಂತಾದವುಗಳ ಜತೆಗೆ ಇದೊಂದು ಹೊಸ ಯುನೀಕಸ್ತ್ರ ಸಿಕ್ಕಿತು ಬಿಡು ” ಎಂದೆ.

ಸೀನಿ ಹಲ್ಲುಕಿರಿದ !

# ಬೇಸ್ತು ಬಿದ್ದ ಸೀನಿ !

ನಾವು—ಎಂದರೆ ನಾನು ಸೀನಿ ಜತೆಗಾರರು. ನಾವು ಹೈಸ್ಕೂಲಿನಲ್ಲಿರುವಾಗ ನಮ್ಮ ಪಂಡಿತರು ಒಂದು ಗಂಟೆಯ ಕಾಲ "ತನ್ಮಯತಾ" ಎಂಬುದನ್ನು ವಿವರಿಸಿದ್ದರು. ಅದರಲ್ಲಿ ನಮಗೆ ಗೊತ್ತಾದುದು ಇಷ್ಟು—ಒಂದು ಬಟ್ಟಲು ಕಾಫಿ, ಸೀನಿಯ ತುಟಿ. ಈಚೆಗೆ ನಮ್ಮ ಕಾಲೇಜಿನಲ್ಲಿ ಪ್ರೊಫೆಸರು ಅದ್ವೈತದ ವಿಚಾರ ಹೇಳುತ್ತ "ಈಗ ನೋಡಿ. ಸೀನಿಯ ಕೆಂಪು ತುಟಿ, ಒಂದು ಬಟ್ಟಲು ಕರಿಯ ಕಾಫಿ...." ಎಂದು ಮೊದಲು ಮಾಡಿದರು. ಅಂದಮೇಲೆ ಸೀನಿಗೂ ಕಾಫಿಗೂ ಗಳಸ್ಯಕಂಠಸ್ಯ ಎನ್ನುವುದು ಹೆಚ್ಚಿನ ಮಾತು.

ಮೊನ್ನೆ ನಮ್ಮ ಪಟಾಲಂ ನಂದೀಬೆಟ್ಟಕ್ಕೆ ಹೋಗಿದ್ದೆವು. ಸೀನಿಯೂ ಜತೆಯಲ್ಲಿದ್ದ. ನಂದೀಬೆಟ್ಟವಿದೆ ಮೂಲೆಯಲ್ಲಿ ಪೊರಕೆ ನಿಲ್ಲಿಸಿದ ಹಾಗೆ—ಅಂದರೆ ಬೆಟ್ಟ ಬಹಳ ಕಡಿದು. ಬೆಂಗಳೂರು ಬಿಡುವ ವೇಳೆಗೆ ಕಾಫಿ ಆಗಲಿಲ್ಲ. ಸ್ಟೇಷನ್ ಕಾಫಿ ಬಣ್ಣದ ನೀರು. ನಮಗೇನೊ ಪರವಾಗಿರಲಿಲ್ಲ. ಸೀನಿಯ ಸಂಕಟ ಸರ್ವೇಶ್ವರನಿಗೆ ಗೊತ್ತು. ಸೀನಿ ಗೊಣಗುಟ್ಟುತ್ತಲೇ ಬೆಟ್ಟ ಹತ್ತಿದ. ಬೆಟ್ಟದ ತುದಿಮುಟ್ಟಿ ಹುಲ್ಲಿನಮೇಲೆ ಬಾಯಿಬಿಡುತ್ತ ಬಿದ್ದುಕೊಂಡು "ಅಮ್ಮಮ್ಮ ! ಯಾವನಾದರೂ ಪುಣ್ಯಾತ್ಮ ಒಂದು ಕಪ್ ಕಾಫಿ ಕೊಟ್ಟರೆ ಒಂದು ರೂಪಾಯಿ ಬೇಕಾದರೂ ಕೊಟ್ಟೇನು—ಕಪ್ಪಿಗೆ" ಎಂದ.

ಇದನ್ನು ಕೇಳಿದ ಕಾವಲುಗಾರನು "ಕಾಪೀಗಾಕೆ ಇಷ್ಟು ಪಂಚೇತಿ. ಹೋಟಲಾಕಡೆ ಐತೆ ಸೋಮಿ !" ಎಂದ.

ಕೇಳಿದುದು ತಡ. ಸೀನಿ ದುಡುಗುಟ್ಟಿಕೊಂಡು ಓಡಿದ. ಪಟಾಲಂಗೆಲ್ಲ ಕಾಫಿ ವಿನಿಯೋಗ ಅವನದು.

ಸೀನಿ ಕಾಫಿ ಕುಡಿದು ತೇಗಿದ ಮೇಲೆ "ಬಿಲ್" ಬಂತು. ಸೀನಿ "ಬಿಲ್" ನೋಡಿದ. ಅವನ ಮೈ ಬೆಚ್ಚಗಾಯ್ತು. ಬಿಸಿಯಾಯಿತು. ಉರಿಯಿತು.

" ಏನ್ರಿ ! ಅರ್ಧ ಕಪ್ಪಿಗೆ ಎರಡಾಣೆಯೆ ? " ಎಂದ.

" ಹೌದು ಸಾರ್ ! ಸಂದೀಬೆಟ್ಟ...."

" ಹೌಧೌದು ! ಏಸು ಹಳ್ಳಿಯ ಗಮಾರ ಎಂದುಕೊಂಡಿರೋ ಸನ್ನ ! ಮೈಸೂರಲ್ಲಿ ಆರುಕಾಸು, ಬೆಂಗಳೂರಲ್ಲಿ ಒಂಭತ್ತುಕಾಸು, ಇಲ್ಲಿ ಎರಡಾಣೆ ! ಏಸು ಹುಡುಗಾಟ ! "

ಹೊಟೇಲಿನವನು ಮಾತನಾಡದೆ ಹಸಿಯ ಹಾಲನ್ನು ಒಲೆಯ ಮೇಲಿಟ್ಟ. ಇಬ್ಬರಿಗೂ ಮಾತಿಗೆ ಮಾತು ಬೆಳೆಯಿತು. ಒಲೆಯ ಮೇಲಿದ್ದ ಹಾಲು ಉಕ್ಕಿತು.

ಹೀಗಾದರೆ ಇದು ಮುಗಿಯುವ ಹಾಗಿಲ್ಲವೆಂದುಕೊಂಡು " ಸೀನಿ ! ಒಂದು ರೂಪಾಯಿ ಕೊಡುತ್ತೇನೆಂದವನು ಎರಡಾಣೆಗೆ ಜಗಳ ಕಾಯುತ್ತಿಯಲ್ಲೊ ! " ಎಂದೆ.

" ಸಾಕು ಸುಮ್ಮನಿರೊ ! ಕಾಸಿನ ಬೆಲೆ ನನಗೆ ಗೊತ್ತು. ಈ ನಾಜೋಕಿನ ಕಾಲದಲ್ಲಿ ಪೌರೋಹಿತ್ಯ ಗೋಲಿ ಆಟ ಅಲ್ಲ ! " ಎಂದು ಸೀನಿ ಮತ್ತೆ ಹೊಟೇಲಿನವನ ಕಡೆ ತಿರುಗಿದ. ಸೀನಿಯ ಹಣೆಯ ವಿಭೂತಿಯ ಮೇಲೆ ಒಂದು ಪಟ್ಟೆ ಬೆವರಿತ್ತು !

ಆ ಹೊತ್ತು ಸೌದೆಯವನನ್ನು ಹೆದರಿಸಿದ ಹಾಗೆ ಎಂದು ತಿಳಿದನೋ ಏನೋ ! ಆದರೆ ಹೊಟೇಲಿನವನು ತಂಬಾಕು ವೀಳ್ಯದೆಲೆ ಎಡದವಡೆಯಲ್ಲಿ ಒತ್ತರಿಸಿಕೊಂಡಿದ್ದ ! ಸೀನಿ ಸಾಕಾಗಿ ಅವನು ಕೇಳಿದ ದುಡ್ಡು ಕಕ್ಕಿಬಿಟ್ಟು ತೆಪ್ಪಗಾದ.

# ಸೀನಿಗೆ ಏಕೆ ಸಿಟ್ಟುಬಂತು ?

ಸೀನಿ ಒಂದು ದಿನ ರಂಗಾಜೋಯಿಸರ ಮನೆಗೆ ಪೌರೋಹಿತ್ಯಕ್ಕೆ ಹೋಗಿದ್ದ. ಎರಡು ಗಂಟೆ ಆಗುತ್ತ ಬಂದಿತು. ರಂಗಾಜೋಯಿಸರು ಕೆಲಸ ಬೇಗನಾಗಲೆಂದು "ಸೀನಿ! ಮಂತ್ರ ಹೇಳೊ!" ಎಂದರು. ಹಾಗೆಂದದ್ದು ತಡ—ಸೀನಿ ಎದ್ದವನೆ ಜೋಯಿಸರ ಕೆನ್ನೆಗೆ ಫಳೀರೆಂದು ಬಿಗಿದ. ಜೋಯಿಸರ ಹತ್ತಿರ ಕೋಪದ ಕಂಪೇ ಇಲ್ಲ. ಆದರೆ ಅವರ ಕುತೂಹಲ ಕೆರಳಿತು. ಆ ಹೊತ್ತು ಸುಮ್ಮನಿದ್ದು ಮಾರನೆಯ ದಿನದಿಂದ ಸೀನಿಗೆ ಸಿಟ್ಟೇಕೆ ಬಂದಿತು ಎಂಬ ಶೋಧಕ್ಕೆ ಮನಹಚ್ಚಿದರು.

ಅವರ ಶೋಧದ ಸೂಜಿಯ ಮೊನೆಗೆ ಏನೂ ಸಿಗಲಿಲ್ಲ. ಕೊನೆಗೆ ನನ್ನ ಹತ್ತಿರ ಬಂದರು. ನಾನು ಹೇಳಿದೆ.

ಸೀನಿ ಹನ್ನೆರಡು ವರುಷದ ವರೆಗೂ ಹಾಸಿಗೆಯಲ್ಲಿ....ಎಂದರೆ ಬೆಳಗಿನ ಝಾವ ಐದು ಗಂಟೆಯ ವೇಳೆಗೆ ಅವನ ಹಾಸಿಗೆಯ ಕೆಳಭಾಗ ಅಂಗೈಯಿನಷ್ಟಗಲ....ಎಂದರೆ ದಿನ ಬೆಳಿಗ್ಗೆ ಅವನ ಹಾಸಿಗೆ ಬಿಸಿಲು ಕಾಯಿಸಿಕೊಳ್ಳುವುದು....ಸೀನಿಯ ತಂದೆ ತಿಂಗಳಿಗೆರಡು ಛಡಿ ಮನೆಗೆ ತರುತ್ತಿದ್ದರು.

ಒಂದು ನವರಾತ್ರೆ, ಸೀನಿಯ ಚಿಕ್ಕಪ್ಪ ಮೈಸೂರಿಗೆ ಬಂದಾಗ ಈ ಉತ್ಸವವನ್ನು ಕೇಳಿ "ಸೀನಿ! ನಾನು ಒಂದು ಮಂತ್ರ ಹೇಳಿಕೊಡುತ್ತೇನೆ. ದಿನ ಎರಡಾವರ್ತಿ ಜಪಿಸು. ಇದು ನಿಂತುಹೋಗುತ್ತದೆ. ಏಟೂ ತಪ್ಪುತ್ತದೆ" ಎಂದರು. ಸೀನಿ ಸಂತೋಷದಿಂದ ಒಪ್ಪಿಕೊಂಡ.

ಅವರು ಆ ದಿನ ರಾತ್ರಿ ಸೀನಿಯನ್ನು ಮಲಗುವುದಕ್ಕೆ ಮೊದಲು ಕರೆದು ಕೂರಿಸಿಕೊಂಡು ಗಂಭೀರವಾಗಿ "ಸೀನಿ! ಹೇಳು! ಕ್ಯಾಹುಸೇನ್ ಬಾಹುಸೇನ್—ಓಲಿ ದೂಲ!" ಎಂದರು.

ಸೀನಿ ಮುಖಮುಖ ನೋಡಿದ. ಚಿಕ್ಕಪ್ಪನವರ ಮುಖ ಗಂಭೀರವಾಗಿತ್ತು. "ಹೇಳು" ಎಂದರು.

ಸೀನಿ ಹೇಳಿದ: "ಕ್ಯಾಹುಸೇನ್ ಬಾಹುಸೇನ್—ಓಲಿ ದೂಲ!"

" ಹೇಳು ಹತ್ತು ಸಲ."

ಸೀನಿ ಹತ್ತು ಸಲ ಹೇಳಿದ.

" ಸೀನಿ ! ಹೊರಗೆ ಹೋಗಿ ಬಚ್ಚಲ ಮುಂದೆ ಪಂಚೆ ಮುದುರಿಕೊಂಡು ಕುಳಿತು ಇನ್ನೊಂದು ಹತ್ತು ಸಲ ಹೇಳು."

ಸೀನಿ ಹೋಗಿ ಕುಳಿತು ಹೇಳಿಬಂದು ಮಲಗಿದ....

ಸೀನಿಯ ಚಿಕ್ಕಪ್ಪನವರು ಬೆಳಿಗ್ಗೆ ಐದು ಗಂಟೆಗೆ ಮುಂಚೆಯೇ ಅವನನ್ನು ಎಬ್ಬಿಸಿ " ಸೀನಿ ಮಂತ್ರ ಹೇಳು " ಎಂದರು.

ಸೀನಿ ನಿದ್ದೆಗಣ್ಣಿನಲ್ಲಿ " ಕ್ಯಾಹುಸೇನ್ ಬಾಹುಸೇನ್—ಓಲಿ ದೂಲ " ಎಂದ.

" ಹೇಳು ಹತ್ತು ಸಲ."

ಸೀನಿ ಹತ್ತು ಸಲ ಹೇಳಿದ.

" ಸೀನಿ ! ಹೋಗಿ ಹೊರಗೆ ಬಚ್ಚಲ ಮುಂದೆ ಪಂಚೆ ಮುದುರಿಕೊಂಡು ಕುಳಿತು ಹತ್ತು ಸಲ ಹೇಳು ! "

ಸೀನಿ ಹೋಗಿ ಕುಳಿತು ಹೇಳಿ ಬಂದ.

" ಹೇಳು ! ಮಂತ್ರ ಹೇಳು ! "

ಸೀನಿಗೆ ಓಲಿ ದೂಲ ಹೇಳುತ್ತ ನಿದ್ದೆ ಬಂದಿತು.

ಹತ್ತು ದಿನ ಹೀಗೆ ಹೇಳುವಲ್ಲಿ ಹಾಸಿಗೆಯು ಬಿಸಿಲುಕಾಯಿಸಿಕೊಳ್ಳುವುದು ನಿಂತುಹೋಯಿತು.

ಇದು ನಮಗೆಲ್ಲ ತಿಳಿದು ನಾವು " ಸೀನಿ ! ಮಂತ್ರ ಹೇಳೊ ! " ಎಂದು ಲೇವಡಿ ಮಾಡುತ್ತಿದ್ದೆವು. ಸೀನಿಗೂ ತನ್ನ ಪೆಚ್ಚು ಗೊತ್ತಾಗಿ ಹೇಳಿದಾಗಲೆಲ್ಲ ಉರಿದುರಿದು ಬೀಳುತ್ತಿದ್ದ.

ಆ ಹೊತ್ತು ಜೋಯಿಸರು " ಸೀನಿ ! ಮಂತ್ರ ಹೇಳು ! " ಎಂದಾಗ ಹಿಂದಿನದೆಲ್ಲ ನೆನಪುಬಂದು ಮೈಮೇಲಿನ ಎಚ್ಚರ ತಪ್ಪಿತು. ಜೋಯಿಸರು ಲೇವಡಿ ಮಾಡುತ್ತಾರೆಂದುಕೊಂಡ. ಅದಕ್ಕೇ ಮರವಿನಲ್ಲಿ ಅವರ ಕೆನ್ನೆಗೆ ಬಿಗಿದ !

# ಸೀನಿಯೂ ಶಾಕುಂತಲವೂ

ಸೀನಿ ಈಗಲೂ ಶಾಕುಂತಲ ಎಂದರೆ ಸಿಡಿದುಬಿದ್ದು ನಗುತ್ತಾನೆ.

ಒಂದು ಸಲ ನಮ್ಮ ಊರಿನಲ್ಲಿ ಕಾಳಿದಾಸ ಮಹೋತ್ಸವವಾಗ ಬೇಕಾದಾಗ ಅಲ್ಲಿನ ವ್ಯವಸ್ಥಾಪಕರು ಬಂದು ಸೀನಿಯನ್ನು ಶಾಕುಂತಲದ ವಿಚಾರವಾಗಿ ಮಾತನಾಡಬೇಕೆಂದು ಕೇಳಿಕೊಂಡರು. ಸೀನಿ ಒಪ್ಪಿ ಕೊಂಡ. ಸೀನಿ ಪಂಡಿತಪುತ್ರ. ಎಂದರೆ....ಅಲ್ಲ....ಸಾಕ್ಷಾತ್ ಪಂಡಿತ ಪುತ್ರ....ಎಂದರೆ ಅವರ ತಂದೆ ಘನಪಾಟಿಗಳು!

ಆ ದಿನ ಅಧ್ಯಕ್ಷರಾಗಲಿಕ್ಕಾಗಿ ಊರಿನ ಪ್ರಮುಖರೊಬ್ಬರನ್ನು —ಹೆಚ್ಚು ಸಂಬಳದ ತಾಬೇದಾರರನ್ನು —ಆಹ್ವಾನಿಸಿದರು. ಅವರೂ ಒಪ್ಪಿಕೊಂಡರು.

ಸಭೆಯಲ್ಲಿ ಸೀನಿಯ ಭಾಷಣವು ರಸಿಕಜನ ಮನೋಹ್ಲಾದಕವಾಗಿತ್ತು. ಅವನ ಭಾಷಣಕ್ಕೆ ಚಪ್ಪಾಳೆಯ ಮಳೆ ಸುರಿದುಹೋಯಿತು.

ಅಧ್ಯಕ್ಷರು ಭಾಷಣಕ್ಕೆ ಮೊದಲು ಮಾಡಿದರು....ಆ ಊರು, ಅಲ್ಲಿಯ ದೊಡ್ಡ ಮನುಷ್ಯರು ಮುಂತಾದ ವಿಷಯಗಳನ್ನೆತ್ತಿ ಜಡಿಮಳೆ ಹಿಡಿದ ಹಾಗೆ ಹಿಡಿದು ಅದನ್ನೇ ವಿಸ್ತಾರವಾಗಿ ವಿಜೃಂಭಿಸಿ ವಿವರಿಸುತ್ತ ಬಂದರು. ಅಷ್ಟರಲ್ಲಿ ಪ್ರಕೃತವು ಸ್ಮೃತಿಗೆ ಬಂತು. ಸೀನಿಯ ಕಡೆ ತಿರುಗಿ ಪಿಸುಮಾತಿ ನಲ್ಲಿ "ಅಂ! ಏನ್ರಿ! ಕಾಳಿದಾಸನಿಗೆ ಸಂಸ್ಕೃತ ಬರುತ್ತಿತ್ತೆ?" ಎಂದರು.

ಅವರ ಪ್ರಶ್ನೆ ಕೇಳಿ ಸೀನಿಗೆ ದಂಗು ಬಡಿದುಹೋಯಿತು. ಆದರೆ ತತ್ಕ್ಷಣವೇ ಮುಖದಲ್ಲಿ ತುಂಟನಗು ತುಳುಕಿತು. ಅಧ್ಯಕ್ಷರ ಕಿವಿಗೆ ಬಾಯಿ ಹಚ್ಚಿ "ಸರಿ! ಆ ಪ್ರಾಣೀಗೆಲ್ಲಿ ಗೊತ್ತಿತ್ತು ಸಂಸ್ಕೃತ! ಕಾವ್ಯಾನೆಲ್ಲ ಊರ್ದೂ ಒಳಗೆ ನಾಟಕಾನೆಲ್ಲ ಮರಾಠಿ ಒಳಗೆ ಬರೆದಿಟ್ಟ. ಈಚೆಗೆ ಯಾರೋ ಸಂಸ್ಕೃತಕ್ಕೆ ತರ್ಜುಮೆ ಮಾಡಿದರು!" ಎಂದ.

ಅಧ್ಯಕ್ಷರ ಮುಖವು ಪ್ರಫುಲ್ಲವಾಯಿತು. ಭಾಷಣವನ್ನು ಮುಂದು ವರಿಸಿದರು. ಸಾಸಿವೆ ಕಾಳಿನಿಂದ ಸಕ್ಕರೆಗುಂಬಳಕಾಯಿ ಮಾಡಿದರು. ಪುಂಖಾನುಪುಂಖವಾಗಿ ವಾಗ್ಬಾಣದ ಸುರಿ ಹೊರಟಿತು.

ಇದಕ್ಕಿದ್ದಂತೆ ಸಭಿಕರೆಲ್ಲ ಗೊಳ್ಳೆಂದರು. ಮೂಲೆಯಿಂದ ಯಾವನೋ
"ಕಾಳಿದಾಸ ಕನ್ನಡ ಬರೆದ ಕಾಣ್ರಿ!" ಎಂದ. ಗುಲ್ಲೋಗುಲ್ಲಾಯಿತು.
ಅಧ್ಯಕ್ಷರು "ಶುದ್ಧ ಪೋಲಿ ಭಡವಗಳು!" ಎಂದು ಎಲ್ಲರನ್ನೂ
ಬಯ್ಯುತ್ತ ದುರ್ದಾನ ತೆಗೆದುಕೊಂಡವರಂತೆ ಹೊರಟುಹೋದರು.
ಸೀನಿ ಈಗಲೂ ಶಾಕುಂತಲ ಎಂದರೆ ಸಿಡಿದುಬಿದ್ದು ನಗುತ್ತಾನೆ.

# ಸೀನಿ ಸಂನ್ಯಾಸಿಯಾದುದು

ನೀಲವು ನಗುನಗುತ್ತ ಇದ್ದಕ್ಕಿದ್ದಂತೆಯೆ ಬರಸಿಡಿಲನ್ನು ಕಕ್ಕಿತು ! ಸೀನಿ ಸಂನ್ಯಾಸಿಯಾದ ! ಸುಖಸಂತೋಷಗಳ ಸಾಗರದಲ್ಲಿ ಹುಟ್ಟಿ ಬೆಳೆದ ಸೀನಿ ಸಂನ್ಯಾಸಿಯಾದ ! ತನ್ನ ಇಪ್ಪತ್ತೆಂಟನೆಯ ವರುಷದ ವೇಳೆಗೆಯೆ ಐವತ್ತು ಜನರಿಗೆ ಸಂಸಾರದ ಸುಖಮಯವಾದ ಸಂಕಲೆ ತೊಡಿಸಿದ್ದ ಸೀನಿ ಸಂನ್ಯಾಸಿಯಾದ ! “ ಲೋಕ ಬೆರಗಾಯ್ತು ! ”

* * * * *

೪-೨-೩೨ ರಲ್ಲಿ ಬೆಳಗ್ಗೆ ಹತ್ತು ಗಂಟೆಯ ವೇಳೆಗೆ ಸೀನಿಯು ರೋಗಗ್ರಸ್ತನಾದ ತನ್ನ ಮಿತ್ರನೊಬ್ಬನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದ.

“ ಡಾಕ್ಟರ್ ! ಇವರನ್ನು ‘ ಇನ್‌ಪೇಷೆಂಟಾ ’ ಗಿ ಸೇರಿಸಿಕೊಳ್ಳಬೇಕು.”

“ ಯಾರು ? ಇವರು ನಮ್ಮ ನಾರಣಪ್ಪನವರಲ್ಲವೆ ! ”

“ ಹೌದು ಅವರೇ !....ಬಂದೆ, ಗಾಡಿ ಬಾಡಿಗೆ ಕೊಟ್ಟು ಬರುತ್ತೇನೆ ”

....................

ಸೀನಿ ಐದು ನಿಮಿಷ ಕಳೆದು ಬಂದು ತನ್ನ ಸ್ನೇಹಿತನು ಅಲ್ಲಿಲ್ಲದುದನ್ನು ಕಂಡು “ ಡಾಕ್ಟರ್ ! ನಾರಣಪ್ಪನವರೆಲ್ಲಿ ? ” ಎಂದ.

ಡಾಕ್ಟರು “ ‘ ವಾರ್ಡ್‌ಫ್ಯೂನ್ ’ ! ಇವರನ್ನು ‘ ಪೇಷೆಂಟ್ ’ ಅರುವತ್ತು ಮೂರರ ಹತ್ತಿರ ಕರೆದುಕೊಂಡು ಹೋಗು ” ಎಂದರು.

‘ ಪೇಷೆಂಟ್ ’ ಅರುವತ್ತುಮೂರು ! ಬದುಕಿನ ಬಣ್ಣ ಬಿಟ್ಟಿತು !

ಸೀನಿಯು ಹಿಂದೆ ನಾರಣಪ್ಪನಾಗಿದ್ದ ‘ ಪೇಷೆಂಟ್ ’ ಅರುವತ್ತು ಮೂರರ ಬಳಿ ಹೋದನು.

‘ ಪೇಷೆಂಟ್ ’ ಅರುವತ್ತುಮೂರು “ ಸೀನಿ ! ಒಂದು ಕಿತ್ತಿಲೆಹಣ್ಣು ತಂದುಕೊಡು ” ಎಂದಿತು. ಸೀನಿ ಕಿತ್ತಿಲೆಹಣ್ಣು ತರಲು ಹೊರಟ........

ಒಂದು ಹತ್ತು ನಿಮಿಷದಲ್ಲಿ ಕಿತ್ತಿಳೆಹಣ್ಣು ತಂದ. ‘ ಪೇಷೆಂಟ್ ’ ಅರುವತ್ತುಮೂರು ಇದ್ದಲ್ಲಿ ಇರಲಿಲ್ಲ.

"ಡಾಕ್ಟರ್! ನಾರಣ—ಅಲ್ಲ, 'ಪೇಷೆಂಟ್' ಅರುವತ್ತುಮೂರು ಎಲ್ಲಿ?"

"'ವಾರ್ಡ್‌ಫ್ಯೂನ್'! ಆ 'ಬಾಡಿ' ಕೊಟ್ಟುಬಿಡು ಇವರಿಗೆ!"

ಆ 'ಬಾಡಿ'!

ನಾರಣಪ್ಪ....! 'ಪೇಷೆಂಟ್' ಅರುವತ್ತುಮೂರು....! ಆ 'ಬಾಡಿ'....!

ಬಾಳಿನ ಹುರುಳಿಲ್ಲದ ಅಗಾಧವು ಸೀನಿಯ ಕಣ್ಣಿಗೆ ಎದುರಾಯಿತು. ನಮ್ಮ ಪೂರ್ವಿಕರು ಹೇಳುವಂತೆ ಹೇಳುವುದಾದರೆ—

"ಅದುವೆ ನಿರ್ವೇಗಕಾರಣಮಾಗೆ ಸೀನಿ ಸಂನ್ಯಾಸಮನಪ್ಪುಕೆಯ್ದಂ!"

# ನಾವಿರುವ ಬದುಕು

## (ಹೊಸದಾಗಿ ಬರೆದ ಹಳೆಯ ಕತೆ)

ಅಜ್ಜಿ ಹುಡುಗಿಯಾಗಿದ್ದಾಗ ಮನೆಯಲ್ಲಿ ಮೂರು ಕರುಗಳಿದ್ದುವು. ಒಂದು ಗೂಳಿಯಂತಿತ್ತು. ಇನ್ನೊಂದು ಕೊಂಚ ಸುಮಾರಾಗಿತ್ತು. ಮೂರನೆಯದಂತೂ ಕೇಳುವ ಹಾಗೇ ಇರಲಿಲ್ಲ—ಹಾಗಿತ್ತು ಒಣಗಿಕೊಂಡು.

ಗೂಳಿಯಂತಿರುವ ಕರುವನ್ನು ಕಂಡು ಮಿಕ್ಕ ಎರಡಕ್ಕೂ ಆಶ್ಚರ್ಯ. ಒಂದು ದಿನ ತಡೆಯಲಾರದೆ ಎರಡನೆಯ ಕರು ಮೊದಲನೆಯದನ್ನು ಕುರಿತು "ನೀನು ಹೇಗೆ ಇಷ್ಟು ದಪ್ಪನಾದೆ?" ಎಂದಿತು. ಮೊದಲನೆಯದು "ನಾನು ತಾಯ ಮೊಲೆಹಾಲು ಕುಡಿದು ಹೀಗಾದೆ" ಎಂದಿತು. ಎರಡನೆಯದು ಕಣ್ಣು ಬಿಡುತ್ತ "ಆಂ! ತಾಯ ಮೊಲೆಯಲ್ಲಿ ಹಾಲಿದೆಯೆ!" ಎಂದು ಮಹದಾಶ್ಚರ್ಯದಿಂದ ಮೂರನೆಯದರ ಬಳಿ ಹೋಗಿ "ತಾಯ ಮೊಲೆಯಲ್ಲಿ ಹಾಲಿದೆಯಂತೆ! ನಾನೂ ಕುಡಿದು ದಪ್ಪನಾಗುತ್ತೇನೆ!" ಎಂದು ಕುಣಿದಾಡಿತು.

ಮೂರನೆಯದಕ್ಕೆ ದಿಗ್ಭ್ರಮೆಯಾಗಿ "ಅಲ್ಲ! ತಾಯಿಗೆ ಮೊಲೆಯಿದೆಯೆ!" ಎಂದು ಕೇಳಿತು. ಎಡರನೆಯ ಕರು ನಗುತ್ತ ಹೊರಟು ಹೋಯಿತು.

ಈಗ ನಮ್ಮ ಕಾಲಕ್ಕೆ ಇನ್ನೊಂದು ಕರು ಹುಟ್ಟಿತು. ಬರಿಯ ಮೂಳೆ ಚಕ್ಕಳ. ಪ್ರತಿಷ್ಠೆ ನಿರ್ವಾಹವಿಲ್ಲ. ಅದಕ್ಕೆ ಈ ಮೂರು ಹಸುಗಳೂ—ನಮ್ಮ ಅಜ್ಜಿಯ ಕಾಲದ ಕರುಗಳು—ಹೇಗೆ ದಪ್ಪನಾದವೆಂಬುದು ಸಮಸ್ಯೆಯಾಯಿತು. ಕೊಂಚ ಜೋರಿನಿಂದ ಆ ಹಸುಗಳ ಬಳಿ ಹೋಗಿ ಕೇಳಿತು. ಮೂರನೆಯ ಹಸು "ತಾಯ ಮೊಲೆಯಲ್ಲಿ ಹಾಲಿದೆ. ಕುಡಿ. ದಪ್ಪನಾಗುತ್ತೀಯೆ" ಎಂದಿತು.

ಹೊಸಕರು ಡಂಗಾಗಿ ಕಡೆಗೆ ಮಾತು ಹುಡುಕಿ "....ತಾಯಿ!....

ಓಲೆ !....ಹಾಲು !....ಆಂ....ಏನದು ಆ ತಾಯಿ ಎನ್ನುವುದು ? ”
ಂದಿತು.

ಆ ಮೂರು ಹಸುಗಳೂ ಅದನ್ನು ಕೇಳಿ ನಕ್ಕು “ ಹೀಗೆ ಹೆತ್ತ
ಾಯನ್ನೇ ಮರೆತರೆ ನೀನು ಏಗುವುದು ಬಲು ಕಷ್ಟ ! ” ಎಂದುವು.

# ಹಸು

"....ತಂಗಿ! ಆ ಹೊತ್ತು ನೀನು ನನ್ನ ಮನೆಯ ಬಳಿ ಬಂದಾಗ ನಾನೇ ಆದರಿಸಿ ನಿನ್ನನ್ನು ಒಳಕ್ಕೆ ಕರೆಯಲಿಲ್ಲವೆ! ನೀನು ಬಂದ ಮೇಲೆ ನಿನಗೂ ಮನೆಯವರಿಗೂ ಏನಾದರೂ ಭೇದವಮಾಡಿರುವೆನೆ! ನನ್ನ ಮನೆಯ ಪದಾರ್ಥಗಳನ್ನು ನೀನು ದೋಚಿಕೊಡುತ್ತಿರುವಾಗಲೂ 'ನನ್ನ ತಂಗಿ' ಎಂದು ನಾನು ಸೈರಿಸಿಲ್ಲವೆ! ಈಗ ನನ್ನ ಜೀವ ಹೀರಲು ಹವಣಿ ಸುತ್ತಿರುವೆಯಲ್ಲ! ತಂಗಿ! ನೀನು ಹೀಗಾಗುವೆಯೆಂದು ನಾನು ಎಣಿಸಿರ ಲಿಲ್ಲ. ಹಸುವಿನಂತೆ ಬಂದವಳು ಹುಲಿಯಂತಾದೆಯಲ್ಲೆ !........"

ದೂರದಿಂದ ಬಂದಳೆಂದು ಒಳಗೆ ಕರೆತಂದು, ಇರಲು ತಾವಿತ್ತು, ಕೇಳಿ ದುದನ್ನೆಲ್ಲ ಸಲಿಸಿದ ಅಕ್ಕನ ಕುತ್ತಿಗೆಯನ್ನು ತಂಗಿಯು ಎಡಗಾಲಿಂದ ಮೆಟ್ಟಿದ್ದಳು. ಅಕ್ಕನು ನೋವಿನ ಸಂಕಟದಿಂದ ನುಡಿಯುತ್ತಿದ್ದರೆ ತಂಗಿಯು ಕೊಂಚವೂ ಎದೆಗರಗದೆ ನಗುನಗುತ್ತ ಹೇಳಿದಳು :

"ಅಕ್ಕ! ಹುಲಿಯನ್ನು ಹಸುವೆಂದು ನೀನು ಮೋಸಹೋದರೆ ಯಾರೇನ ಮಾಡಿಯಾರು!"

"ತಂಗಿ! ಉಂಡ ಮನೆಗೆ ಕೇಡೆಣಿಸುವ ನಿನ್ನಂತಹವಳು ಬೇರೆ ಯಾರಾದರೂ ಇರುವರೇನೆ!"

"ಏಕಿರಬಾರದು ಅಕ್ಕ?"

"ಕಂಡವರು ಏನೆಂದಾರೆಂಬ ಭಯವಾದರೂ ನಿನಗಿಲ್ಲವೇನೆ? ಮಾನದ ಮೇಲೆ ದೃಷ್ಟಿಯಿಲ್ಲವೆ ನಿನಗೆ?"

"ಅಕ್ಕ! ಮಾನವೆಂದರೇನೆ?"

"ತಂಗಿ! ತಂಗಿ! ಈಗ ನೀನು ನನ್ನನ್ನು ಹಿಂಸಿಸುತ್ತಿರುವುದು ಪಾಪದ ಕೆಲಸ. ದೇವರು ಇದನ್ನು ಒಪ್ಪುವನೆ?"

"ಅಕ್ಕ! ನಿನಗೆ ಜ್ಞಾನಾಜ್ಞಾನವಾಗಿದೆ. ಏನೋ ಮಾನವಂತೆ! ಪಾಪವಂತೆ! ದೇವರಂತೆ! ಏನೆ ಇದೆಲ್ಲ?"

ಅಕ್ಕನು ಬಹು ಕಷ್ಟದಿಂದ ಉಸಿರುಬಿಡುತ್ತ "ತಂಗಿ! ನಿನ್ನನ್ನು ನಾನು ಮನೆಗೆ ಸೇರಿಸಿಕೊಂಡುದು—'ಸುಣ್ಣದಕಲ್ಲ ಮಡಿಲಲ್ಲಿ ಕಟ್ಟಿ ಮಡುವ ಬಿದ್ದಂತೆ!'" ಎಂದಳು.

ತಂಗಿಯು ಎಡಗಾಲ ತುಳಿತವನ್ನು ಸಡಿಲಿಸುವ ಬದುಲು ಬಿಗಿಮಾಡಿ ನಗುನಗುತ್ತ—ಹಾಳು ಅಡಗದ ನಗು—ಹೇಳಿದಳು:

"ಹಾಗಲ್ಲ ಅಕ್ಕ! 'ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಡಂತೆ'! 'ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸಿದಂತೆ'!"

# ತಾನುಂಟೋ ಮೂರು ಲೋಕವುಂಟೋ

ಒಂದು ಸಲ ಹಳ್ಳಿಯಲ್ಲಿ ಸೌದೆ ಜಮಾಯಿಸಲು ಆಳುಗಳಾರೂ ಸಿಕ್ಕದೆ, ನೆಲ್ಲುಹುಲ್ಲು ನೆಲ್ಲುಹೊಟ್ಟುಗಳಲ್ಲಿಯೇ ಬೇಯಿಸಬೇಕಾಯಿತು. ಅನ್ನಕ್ಕೆ ಇಟ್ಟೆ.

ಅನ್ನ ಕುದಿಯುತ್ತ ಬಂದಿತು.

ಇದ್ದಕ್ಕಿದ್ದಂತೆಯೆ ಪಾತ್ರೆಯಿಂದ ಒಂದು ಸಣ್ಣ ಧ್ವನಿ ಕೇಳಿಸಿತು. ಕುತಕುತನೆ ಕುದಿಯುತ್ತಿದ್ದ ಅಕ್ಕಿಯ ಕಾಳುಗಳು ಧಗಧಗನೆ ಉರಿಯುತ್ತಿದ್ದ ನೆಲ್ಲುಹುಲ್ಲುಹೊಟ್ಟುಗಳನ್ನು ಕುರಿತು "ಮೊದಲಿನಿಂದ ನಮ್ಮನ್ನು ಹೆತ್ತು ಹೊತ್ತು ಸಾಕಿ ಸಲಹಿದ ನೀವೇ ನಮ್ಮನ್ನು ಹೀಗೆ ಸಂಕಟಪಡಿಸಿದರೆ ನಾವು ಯಾರಿಗೆ ಮೊರೆಯಿಡೋಣ!" ಎಂದು ಗೋಳಾಡಿದುವು.

ಅದಕ್ಕೆ ನೆಲ್ಲುಹುಲ್ಲುಹೊಟ್ಟುಗಳು ಮೇಳವಾಗಿ ಹೇಳಿದುವು: "ನಿಮ್ಮನ್ನು ಸಂಕಟಪಡಿಸುವುದಿರಲಿ. ಹೀಗೆ ಹತ್ತಿ ಉರಿಯುವುದು ನಮಗೇನು ಹಿತವೆ? ನಮ್ಮ ಬಾಳಿನ ಸೂತ್ರಗಳು ನಮ್ಮ ಕೈಲಿಲ್ಲ. ಇದೋ! ಈ ಒಲೆಯ ಮುಂದೆ ಕುಳಿತ ಇವನು ಹಿಡಿಹಿಡಿಯಾಗಿ ನಮ್ಮನ್ನು ಹಿಡಿದು ಉರಿಸುತ್ತಿರುವಾಗ, ನಾವೇ ದಿಕ್ಕಿಲ್ಲದೆ ಕಂಗೆಟ್ಟಿರುವಾಗ, ನಮ್ಮನ್ನು ದೂಷಿಸಿ ಮೊರೆಯಿಡುವುದು ಯಾವ ನ್ಯಾಯ?" ಎಂದು.

ಅದನ್ನು ಕೇಳಿದೆ. ಒಲೆಗೆ ನೀರು ಚೆಲ್ಲಿದೆ. ನೆಲ್ಲುಹುಲ್ಲಿನ ಉರಿ ಆರಿತು. ಅಕ್ಕಿಯ ಕಾಳಿನ ತಳಮಳ ನಿಂತಿತು........

ಆದರೇನು? ಹೊಟ್ಟೆ ತಾಳಹಾಕಿತು. ತಡೆಯಲಾರದೆ ಪುನಃ ಒಲೆಗೆ ಹುಲ್ಲಿಕ್ಕಿ ಹತ್ತಿಸಿದೆ. ಹುಲ್ಲು ಉರಿಯತೊಡಗಿತು. ಅಕ್ಕಿಯ ಕಾಳು ಕುತಕುತನೆ ಕುದಿಯಿತು........

ಅನ್ನವಾಯಿತು. ತಿಂದೆ. ಹೊಟ್ಟೆ ತುಂಬಿತು.

# ತೃಪ್ತಿ

ಯುವಕನೊಬ್ಬ ತೃಪ್ತಿಯನ್ನು ಅರಸುತ್ತ ಹೊರಟ.

ಇಬ್ಬರು ಬ್ರಾಹ್ಮಣರು ತಣಿಯುಂಡು ಮಾತನಾಡುತ್ತ ಬರುತ್ತಿದ್ದರು. "ಅಲ್ರಿ! ಮೊದಲೇ ಅಡಿಗೆ ಹೀಗೆ ಎಂದು ಹೇಳಬಾರದೆ! ಏನಿದೆಯೋ ಏನಿಲ್ಲವೋ ಎಂದು ಚೆನ್ನಾಗಿ ಅನ್ನ ಮೆದಗಿದ ಮೇಲೆ ಭಕ್ಷ್ಯ ತಂದರಲ್ಲ! ಎರಡು ವಡೆ ಅರ್ಧ ಲಾಡು ಕೂಡ ತಿನ್ನಲಾಗಲಿಲ್ಲ!"

ಯುವಕನು ಇನ್ನೂ ಮುಂದೆ ಹೋದ.

ವಿಸ್ತಾರವಾದ ರಾಜ್ಯಗಳನ್ನು ಕಟ್ಟಿಕೊಂಡಿದ್ದ ರಾಜನೊಬ್ಬ "ಬೋರೆ ಗೌಡನಿಗೆ 'ಹತ್ತು ರೂಪಾಯಿ ಕಂದಾಯ ಕೊಡಬೇಕು' ಎಂದೆ. 'ಆಗಲಿ' ಎಂದ. 'ಇಪ್ಪತ್ತು ಕೊಡಬೇಕು' ಎಂದೆ. 'ಹುಂ' ಎಂದ. ಐವತ್ತು ಕೇಳಿದ್ದರೆ...." ಎಂದು ಗೊಣಗುತ್ತಿದ್ದ.

ಯುವಕನ ಚಿಂತೆ ಹೆಚ್ಚಾಯಿತು. ಹೆಜ್ಜೆ ಮುಂದಿಟ್ಟ.

ಒಬ್ಬ ಗುಪ್ತ "ಶೇಕಡ ಹದಿನೆಂಟರಂತೆ ವೆಂಕಟನಿಗೆ ಇನ್ನೂರು ಕೊಟ್ಟೆ. ಹೇಳಿದ ಕಾಲಕ್ಕೆ ಸರಿಯಾಗಿ ಅಸಲು ಒಡ್ಡಿ ಮುಟ್ಟಿಸಿದ. ಅವನು ಕೇಳಿದ ಆರುನೂರೂ ಕೊಟ್ಟಿದ್ದರೆ ಬಡ್ಡಿ ಹೆಚ್ಚು ಬರುತ್ತಿತ್ತಲ್ಲ!" ಎಂದು ಪೇಚಾಡುತ್ತಿದ್ದ.

ಯುವಕನು ಮುಂದೆ ಸಾಗಿದ.

ಉಳುವ ಒಕ್ಕಲಿಗನೊಬ್ಬ "ಅಯ್ಯೋ! ಒಂದೇ ಬೆಳೆ ಬರುತ್ತದಲ್ಲ. ಎರಡು ಬೆಳೆ ಬರಬಾರದೆ! ದೇವರೆ!" ಎಂದು ಒದ್ದಾಡುತ್ತಿದ್ದ.

ಯುವಕನು ಜನಸಂಚಾರವಿಲ್ಲದ ಕಾಡಿಗೆ ನಡೆದು ಬಂದ. ಕಾಡು ಕೂಡ ತೃಪ್ತಿ ಕಂಡಂತಿರಲಿಲ್ಲ. ಮೇರೆಯಿಂದಾಚೆ ಹೋಗಲು ಯತ್ನಿಸುತ್ತಿತ್ತು. ಅಲ್ಲಿಯ ಮರಗಳು ಅಷ್ಟು ರೆಂಬೆ ಹೊತ್ತುದೂ ಸಾಲದೆಂಬಂತೆ ಸಣ್ಣಸಣ್ಣ ಕುಡಿಗಳನ್ನೂ ಮೈಯಲ್ಲಿ ಹೇರಿಕೊಂಡಿದ್ದುವು.

ಯುವಕನು ನಿಟ್ಟುಸಿರಿಟ್ಟು ಅಡಿಯೆತ್ತಿದ.

ಎದುರಿಗೊಂದು ಹುಲಿ ಬಂದಿತು.

"ಹುಲಿಯೆ! ತೃಪ್ತಿ ಕಂಡಿರುವೆಯಾ?"

ಹುಲಿ ಬಾಯಿ ತೆರೆಯಿತು. ಬಾಯಿ ಅಗಾಧವಾಗಿತ್ತು. ಬಾಯೊಳಗೆ ಏನೂ ಇರಲಿಲ್ಲ. ಯುವಕನು ಮುಂದೆ ಹೊರಟ.

ದಾರಿಯಲ್ಲಿ ಒಬ್ಬ ಸಂನ್ಯಾಸಿ ಸಿಕ್ಕಿದ. ಯುವಕನ ಅರಸುವುದನ್ನು ಕೇಳಿ ತಿಳಿದು "ತೃಪ್ತಿ ಎಲ್ಲ ಮಿಥ್ಯ! ನನ್ನ ಜತೆಗೆ ಬಂದು ತಪಸ್ಸು ಮಾಡು!" ಎಂದ.

ಯುವಕನ ಎದೆಭಾರ ಹೆಚ್ಚಾಯಿತು.

ಮುಂದಿದ್ದ ದೊಡ್ಡ ಬೆಟ್ಟವನ್ನು ಕಂಡು ''ಇಲ್ಲಿರಬಹುದು ತೃಪ್ತಿ'' ಎಂದುಕೊಂಡು ನೋಡಿದ. ಇಲ್ಲ! ಬೆಟ್ಟವು ತನ್ನ ಎತ್ತರ ಸಾಲದೆಂದು ಇನ್ನೂ ಎತ್ತರವಾಗಿ ಮುಗಿಲ ಮುಟ್ಟಲು ಯತ್ನಿಸುತ್ತಿರುವಂತೆ ತೋರಿತು.

ಯುವಕನು ನಿರಾಶೆಯ ಮೇಲೆ ಭಾರಬಿಟ್ಟು ಮುಂದೆ ಮುಂದೆ ನಡೆದ. ದಾರಿಯ ಜಲಪಾತದ ಬಳಿ ಬಂದ. ಜಲವು ಮೇಲಿಂದ ಧುಮುಕಿ ಅಡಿಯ ಪಾತ್ರದಲ್ಲಿ ಬೀಳುತ್ತಿತ್ತು. ಪಾತ್ರವು ತನಗೆ ಬೇಕಷ್ಟನ್ನು ಮಾತ್ರ ತೆಗೆದುಕೊಂಡು ಹೆಚ್ಚಿನದನ್ನು ಹೊರಗೆ ಬಿಡುತ್ತಿತ್ತು. ಬಂದ ನೀರೆಲ್ಲ ವನ್ನೂ ನುಂಗಿ ಇನ್ನೂ ಬಾಯಿಬಿಡುತ್ತ ಇರಲಿಲ್ಲ.

ಯುವಕನು ನಿಂತಂತೆ ನೋಡುತ್ತ ನಿಂತ. ಅವನಿಗೆ ಅಲಭ್ಯವು ಲಭಿಸಿದಂತಾಯಿತು. ಕೆಳಗಡೆ ನೊರೆಯ ನಗುವುಕ್ಕಿಸುತ್ತ ಜಲಪಾತ ದಾಳದಲ್ಲಿ ತೃಪ್ತಿಯು ಸೆರಗು ಬೀಸಿ ಯುವಕನನ್ನು ಕರೆದಳು.

ಯುವಕನು ಮೋಹಿತನಾಗಿ ಜಲಪಾತದ ತುದಿಯಿಂದ ಹಾರಿದನು. ತೃಪ್ತಿಯು ತನ್ನ ಸೆರಗಿನಲ್ಲಿ ಅವನನ್ನು ಆತುಕೊಂಡಳು.

# ಪುರಾಣದ ಬದನೆಯಕಾಯಿ

ಮೊನ್ನೆ 'ಸರ್ವ ಸಮತಾ ಸಿದ್ಧಾಂತ ಸಂವರ್ಧಿನೀ' ಎಂಬ ನಮ್ಮ ಸಿರಿಪುರದ ಹೊಸ ವೃತ್ತಪತ್ರಿಕೆಯೊಂದನ್ನು ಓದುತ್ತಿದ್ದೆ. ಸಮಶ್ರುತಿಲಯ ತಾಳಬದ್ಧವಾದ ಸಂಗೀತದಂತಿತ್ತು ಸಂಪಾದಕೀಯ ಲೇಖ. 'ಪಾರತಂತ್ರ್ಯ ಪರಾಭವಾಗ್ನಿ' ಎಂಬ ಶಿರೋನಾಮದ ಕೆಳಗೆ ಸಂಪಾದಕನು ನಮ್ಮ ನಾಡಿನ ದುರವಸ್ಥೆಯನ್ನು ಕುರಿತು ಬಹಳ ಸ್ವಾರಸ್ಯವಾಗಿ ಬರೆದಿದ್ದ. ಓದುತ್ತ ಓದುತ್ತ ಮುಗಿದುಹೋಗಲು "ಮುಗಿದು ಹೋಯಿತೇ" ಎಂದುಕೊಂಡೆ.

ಮಗ್ಗಲು ಹಾಳೆಗೆ ಮುಂದುವರಿದೆ. ಏನೋ ಅಪಸ್ವರ ಎದ್ದಂತಿತ್ತು!

ಮಗ್ಗಲು ಹಾಳೆಯಲ್ಲಿ ಇದ್ದುದು 'ಸಿರಿಪುರದ ಶೂನ್ಯ ಸೌಂದರ್ಯ' ಎಂಬ ಲೇಖನ. ಅದರಲ್ಲಿ ಲೇಖಕನು ಸಿರಿಪುರದ ಮೃಗಾಲಯದಲ್ಲಿ ಮೃಗಗಳು ಕಡಿಮೆಯಾಗಿರುವುದನ್ನು ವ್ಯಂಗ್ಯವಾಗಿ ವಿವರಿಸುತ್ತ, ಬರಿಯ ದೊಡ್ಡ ಮೃಗಾಲಯಕ್ಕಿಂತ ಮೃಗಪಕ್ಷಿಗಳು ತುಂಬಿದ ಚಿಕ್ಕ ಮೃಗಾಲಯವೇ ಮೇಲೆಂದು ಒತ್ತಿ ಒತ್ತಿ ಹೇಳಿದ್ದನು.

ಅದನ್ನು ಓದಿದಾಗ ನನಗೆನ್ನಿಸಿತು: ದೇವರು ಕೊಟ್ಟಂತೆ ಹಾಯಾಗಿ ಓಡಾಡುತ್ತ ಹಾರಾಡುತ್ತ ನಿರಾತಂಕದಿಂದ ಇರುವ ಮೃಗಪಕ್ಷಿಗಳನ್ನು ಬಂಧನದಲ್ಲಿಟ್ಟು, ಅವುಗಳ ಬಂಧನದಲ್ಲಿ ಹಲ್ಲುಕಿರಿದು ಹಿಗ್ಗುವ ಹುಲುಮನುಜನು, ತಾನು 'ಕಾಳರಾಕ್ಷಸರೂಪೀ ಮಾನವರ ಪೈಶಾಚೀ ವರ್ತನದಲ್ಲಿ ಕಂದಿ ಕಂಗಾಲಾಗಿರುವೆ' ನೆಂದು ಬಾಯ್ತುಳಿದು ದನಿಯೆತ್ತಿ ಹುಯ್ಯಲಿಡುವುದು ಯಾವ ನ್ಯಾಯ ?—ಎಂದು.

ಸರ್ವಜನ ಸಾಧ್ಯವಲ್ಲವೆ—ಪುರಾಣದ ಬದನೆಯಕಾಯಿಯ ಕುಯಿಲು ! ಅಂತೆಯೆ ಸರ್ವಜನ ಸಾಮಾನ್ಯವು ತಾನೆ ಈ ಹುಯಿಲು !

# ನನಗೆ ಏಕೆ ಮೆಚ್ಚು ?

ಮೊನ್ನೆ ಪತ್ರಿಕೆಯಲ್ಲಿ ಒಂದು ಸಂಗತಿ ಓದಿದೆ. ಎಲ್ಲಿಯೊ ಒಬ್ಬನು ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿರುವಾಗ ಅವನಿಗೂ ಅಂಗಡಿಯವನಿಗೂ ಮಾತಿಗೆ ಮಾತು ಮೊದಲಾಗಿ ಏಟಿಗೆ ಬೆಳೆಯಿತಂತೆ. ಕಡೆಗೆ ಇಬ್ಬರೂ ಮಚ್ಚು ಹಿಡಿದು ಒಬ್ಬರನ್ನೊಬ್ಬರು ಕಡಿದರಂತೆ.

ಅದನ್ನು ಓದುತ್ತ ಓದುತ್ತ ಮೆಚ್ಚಿ ತಡೆಯಲಾರದೆ 'ಭಲೆ' ಎಂದೆ.

ನನ್ನ ಸಂಗಡಿಗರಿಗೆ ಈ ನನ್ನ ವರ್ತನವು ಹಾಸ್ಯಾಸ್ಪದವಾಯಿತು. ಅವರ ರೀತಿನಡತೆಗಳನ್ನು ಖಂಡಿಸಿದರು.

ಒಪ್ಪಿದೆ. ಅವರು ಅಲ್ಪಕ್ಕಾಗಿ ಕಡಿದಾಡಿದುದು ಸರಿಯಲ್ಲ. ಅದಿರಲಿ.

ನಾನು ಕೇಳುವುದು : 'ಅವರಂತೆ ಜೀವವನ್ನು ತೃಣೀಕರಿಸಿ ಎಂದಾದರೂ ಹೋಗಲೇ ತಕ್ಕುದು ಇಂದೇ ಹೋಗಲೆಂದು ಅದನ್ನು ಅತ್ತ ತಳ್ಳುವವರು ಎಷ್ಟು ಮಂದಿ ?'—ಎಂದು.

# ಒಂದು ನೆನಪು

ಪರೀಕ್ಷೆಯಲ್ಲಿ ಫೇಲಾದಾಗ ಏಕೆ ಫೇಲಾಯಿತು ಎಂದು ಯೋಚಿಸುತ್ತ ಕುಳಿತೆ. "ನಮಗೆ ಓದುವುದಕ್ಕಿರುವ ಹೊತ್ತೆಂದರೆ—ಬೆಳಗ್ಗೆ, ಸಾಯಂಕಾಲ. ಈ ಎರಡು ಹೊತ್ತಿರುವುದರಿಂದ—ಬೆಳಿಗ್ಗೆ ಸಾಯಂಕಾಲ ಓದೋಣವೆಂದು, ಸಾಯಂಕಾಲ ಬೆಳಿಗ್ಗೆ ಓದೋಣವೆಂದು, ಹೀಗೆ ಒಂದು ಹೊತ್ತಿನಿಂದ ಇನ್ನೊಂದು ಹೊತ್ತಿಗೆ ಓದುವುದನ್ನು ತಳ್ಳಿ, ಎರಡು ಹೊತ್ತಿನಲ್ಲಿಯೂ ಓದದೆ ಫೇಲಾಯಿತು" ಎಂದು ತೋರಿತು.

ಆಗ ನನಗೆ ನನ್ನ ಚಿಕ್ಕಂದಿನಲ್ಲಿ ನಡೆದ ವಿಷಯವೊಂದು ನೆನಪಾಯಿತು.

ನಾನು ಒಂದು ಸಲ ತೋಟಕ್ಕೆ ಮಾವಿನಕಾಯಿ ಕೆಡವಲು ಹೋಗಿ ಕೈಗೆ ಎರಡು ಕಲ್ಲು ತೆಗೆದುಕೊಂಡೆ. ಆಗ ತೋಟದವನು ನನಗೆ ಹೇಳಿದ್ದ: 'ಬುದ್ಧಿ! ಗುರಿ ಇಟ್ಟು ಹೊಡಿಯಬೇಕೆಂದರೆ—ಯಾವಾಗಲೂ ಎರಡು ಕಲ್ಲು ತೆಕೋ ಬೇಡಿ. ಒಂದು ಕಲ್ಲು ಹೋದರೆ ಇನ್ನೊಂದು ಅಂತ ಎರಡರಲ್ಲೂ ಏಟು ಬೀಳದಿದ್ದರೂ ಇರಬಹುದು. ಅದಕ್ಕಿಂತ ಒಂದೆ ಕಲ್ಲಿನಲ್ಲಿ ಮನಸ್ಸಿಟ್ಟು ಗುರಿ ಇಡೋದೆ ಪಸಂದು'—ಎಂದು.

ಈ ನೆನಪು ಹಿಂದೆಯೆ ಬಂದಿದ್ದರೆ ಓದಿ ಪಾಸುಮಾಡುತ್ತಿದ್ದೆನೋ ಏನೋ!

# ಉದರ ವೈರಾಗ್ಯವಿದು

ನಮ್ಮ ಸಿರಿಪುರದ 'ನಾರಾಯಣ ನಾಮೋದ್ಧರಣ ನಾಮಧಾರಿಗಳು' ಎಂಬ ಭಜನೆ ಕೂಟದವರು ನೆನ್ನೆ ಶನಿವಾರ ಮನೆಯ ಬಳಿ ಬಂದು ಕಾಣಿಕೆ ಕೊಡಬೇಕೆಂದು 'ರಾಂಗ್' ಮಾಡುತ್ತ ಕುಳಿತರು.

ಬೆನ್ನು ಹತ್ತಿದ ಬ್ರಹ್ಮೇತಿ ಸುಮ್ಮನೆ ಬಿಡುವಂತಿರಲಿಲ್ಲ. ಶುಕ್ರವಾರ ಸಂಜೆ ತಂದು ತಿನ್ನಲಾರದೆ ಗೂಡಿಗೆ ಹಾಕಿದ್ದ ಶಾಲ್ಯದ ಬಾಳೆಹಣ್ಣೆರಡು ಕೈಗೆ ಸಿಕ್ಕಿತು. ವಿನಿಯೋಗಕ್ಕೆ ಸರಿಯಾದ ಪಾತ್ರವೂ ಸಿಕ್ಕಿತ್ತು. ವಿನಿಯೋಗಿಸಿದೆ.

ಕೊಟ್ಟುದು ತಡ, ತೆಗೆದುಕೊಂಡವನು ಸಿಪ್ಪೆಸುಲಿದು ಒಂದು ಹಣ್ಣನ್ನು ಗಬಕ್ಕನೆ ಗೆಬಿಗಿಕೊಂಡ. ಸರಿ, ಅವನಿಗೂ ಮಿಕ್ಕವರಿಗೂ ಹತ್ತಿಕೊಂಡಿತು ಮಾತಿಗೆ ಮಾತು, ಮಾರಾಮಾರಿ. ಭಜನೆಯ ಕೂಟದಲ್ಲಿ ಪ್ರತಿಯೊಬ್ಬನ ತಂದೆ, ತಾತ, ಅಮ್ಮ, ಅಕ್ಕ ಎಲ್ಲರಿಗೂ ಪುನರುದ್ಧಾರ ಜೀರ್ಣೋದ್ಧಾರ ಗಳು ಸಾಂಗವಾಗಿ ನಡೆದುವು. ಶ್ರೀಮನ್ನಾರಾಯಣನಂತೂ ಆ ಬೈಗುಳ ವರ್ಷಾಭಿಷೇಕದಲ್ಲಿ ನೆನೆದು ಅದ್ದಿ ಮುದ್ದೆಯಾಗಿ ಮುದುರಿಕೊಂಡು ಹೋಗಿದ್ದ.

ನಾನೂ ನೋಡುತ್ತಿದ್ದೆ.

ಇಷ್ಟರಲ್ಲಿ ಅವರಲ್ಲಿ ಒಬ್ಬ ಮುದುಕನು "ಲೇ! ಏಟೊತ್ತಲಾ ಜಗ್ಗ? ಯೋಳ್ಲ ಕೆಂಚ ಪದಾನ!" ಎಂದ.

ನಂದದೀವಿಗೆ ಹಿಡಿದಿದ್ದ ಕೆಂಚನು ಪದ ಷುರು ಮಾಡಿದ:

"ಉದರ ವೈರಾಗ್ಯವಿದು ನಮ್ಮ ಪದುಮನಾಬನಲಿ ಲೇಸ ಬಕುತಿ ಯಿಲ್ಲ........"

# ಶಾಸ್ತಿ !

ನನಗೆ ಚಿಕ್ಕಂದಿನಲ್ಲಿ ಬಹಳ ಪ್ರತಿಷ್ಠೆ ಇತ್ತು—ನನಗೆ ಉಚ್ಚರಿಸ ಲಾಗುವಷ್ಟು ಸ್ಪಷ್ಟವಾಗಿ ನನ್ನ ಜತೆಯುವರಾರಿಗೂ ಆಗುವುದಿಲ್ಲವೆಂದು. ಅದೇ ಅದಾಗಿ 'ಕಾಕುತ್ಸ್ಥ', 'ಜಗತ್ಸ್ತ್ರ್ಯಕೃತಕೃತ್ಯ' ಮುಂತಾದ ಹತ್ತಾರು ಪದಗಳನ್ನು ಗಟ್ಟಿಮಾಡಿ ನನಗೆ ಸಿಕ್ಕಿದವರನ್ನೆಲ್ಲ ಕೇಳಿ, ಅವರು ಬಿದ್ದರೆ ಹಿಗ್ಗುತ್ತಿದ್ದೆ.

ಒಂದು ದಿನ ಹೀಗೆಯೆ ಕೇಳುತ್ತ ನಮ್ಮ ಮನೆಗೆ ಹಾಲು ತರುತ್ತಿದ್ದ ಕಾಳನನ್ನು "'ಕಾಕುತ್ಸ್ಥ' ಎನ್ನು" ಎಂದೆ. ಅವನು ತಪ್ಪಿದ. ಅದಕ್ಕೆ ನಾನು ನಕ್ಕುದನ್ನು ಕಂಡು ಕಾಳನು "ಬುದ್ಧಿ ! ನಿಮ್ಮಂಗೇಳಾಕ್ ಬರಾಕಿಲ್ಲ. ನೀವು ನನ್ನಂಗೆ ಬೆರಣಿ ತಟ್ಟೀರ ?" ಎಂದ.

"ಬೆರಣಿ ತಟ್ಟೋದು ಮಹಾ ಬ್ರಹ್ಮ ವಿದ್ಯೆ!" ಎನ್ನುತ್ತ ಎದ್ದೆ. ಕೈಗೆ ತ್ತಿಕೊಂಡ ಸೆಗಣಿ ಉಂಡೆಯಿಂದ ನನ್ನ ಬೆರಳುಗಳನ್ನು ಬಿಡಿಸಿಕೊಳ್ಳುವುದ ರೊಳಗೆ ಕಾಳ ನೂರಾರು ಬೆರಣಿ ತಟ್ಟಿದ್ದ. ಅವನ ಮುಖ ನೋಡಿದೆ. ತಲೆ ತಗ್ಗಿಸಿದೆ.

ಅಂದಿನಿಂದ ತಲೆ ಪುನಃ ಮೊದಲಿನಂತೆ ಎದ್ದಿಲ್ಲ. ಅದಕ್ಕೆ ತಕ್ಕ ಶಾಸ್ತಿ ಆಯಿತು ಆ ಹೊತ್ತು.

# ಹೊಲತಿ

ನಾನು ಕೆಲ ತಿಂಗಳ ಹಿಂದೆ ಮಾರ್ಕೆಟ್ಟಿಗೆ ಹೋಗಿದ್ದಾಗ ದಿನವೂ ವಿಳ್ಳೆದೆಲೆ ಕೊಡುತ್ತಿದ್ದ 'ಪಾರೂತಿ'ಯು "ಬುದ್ದಿ! ಐನೋರ ಮನೆ ಸಾರು ತಿನ್ನ ಬೇಕೆಂತ ಬಾಳ ದಿನದಿಂದ ಆಸೆ" ಎಂದಳು.

"ನಾನೆಲ್ಲಿಂದ ಸಾರು ತರಲಮ್ಮ!" ಎಂದೆ.

"ಏನೋ ಮನೇಲಿ ಮಾಡಿದ್ದು ಒಸಿ."

"ಮನೆಗಿನೆ ಇಲ್ಲಮ್ಮ ನಮಗೆ."

'ಅಂದ್ರೆ—ನಿಮ್ಮ ತಾಯಿ ಅವರು ಯಾವೂರು ಬುದ್ದಿ?"

"ತಾಯಿಗೀಯಿ ಯಾರೂ ಇಲ್ಲಮ್ಮ."

"ಅಕ್ಕ ತಂಗೇರು ಬುದ್ದಿ?"

"ಉಹುಂ!"

"ಅಂದ್ರೆ—ನೀವು ನಿಮ್ಮ ತಂದೇರು ಮಾತ್ರಾನ ಇರೋರು?"

"ತಂದೇನೂ ಇಲ್ಲಮ್ಮ. ಯಾಕೆ ಸುಮ್ಮನೆ ಕೇಳ್ತಿ. ಎಲೆ ಕಟ್ಟು."

"ಅಣ್ಣ ತಂದೀರಿಲ್ವ ಬುದ್ದಿ?"

"ಇದ್ದರು."

"ಲಗ್ನ ಆಗದ ನಿಮಗೆ?"

"ಆಗಿದೆ."

"ಇನ್ನೂ ಅಮ್ಮಾವ್ರು ಬಂದಿಲ್ವ ಬುದ್ದಿ?"

"ಇಲ್ಲ."

"ಮತ್ತೆ ದಿನಾಲು ಈಟೊಂದು ಎಲೆ ಎಲ್ಲಿಗೆ ಬುದ್ದಿ?"

"ನಾನೊಂದು ರೂಮಲ್ಲಿದೇನೆ. ಆ ಮನೇವರಿಗೆ."

"ಅಂಗಾದರೆ ನಿಮಗೀಗಾರೂ ಇಲ್ಲ ಬುದ್ದಿ ನೋಡ್ಕೊಳಾರು?"

"ಇಲ್ಲಮ್ಮ. ಸದ್ಯಕ್ಕೆ ಬೇವಾರ್ಸಿ."

ಎಲೆ ಮಾರುವ 'ಪಾರೂತಿ'ಯ ಕಣ್ಣಿನಲ್ಲಿ ಗುಳಗುಳನೆ ನೀರುಕ್ಕಿ

ಬಂದಿತು. 'ಹೃದಯಕ್ಕೆ ಹೋಲೆಯೆ?' ಎಂದು ಯಾರೋ ಹೇಳಿದ್ದುದು ನೆನಪಾಯಿತು.

ಈಗ 'ಹೊಲತಿ' ಎಂಬ ಶಬ್ದವನ್ನು ಕೇಳಿದರೆ ಸಾಕು—ಅಂದು ಪಾರ್ವತಿಯ ಕಣ್ಣಿನಲ್ಲಿ ಚಿಮ್ಮಿದ ನೀರಿನ ನೆನಪು ನನ್ನ ಕಣ್ಣನ್ನು ತೋಯಿಸುತ್ತದೆ.

# ಮುತ್ತಿನಂತಹ ಮಾತು

ಎಂಟು ಹತ್ತು ಜನ ಕುಳಿತು ಮಾತು ಬೆಳೆಸುತ್ತಿದ್ದ ಕಡೆ. ಒಬ್ಬೊಬ್ಬರು ಒಂದೊಂದು ಮಾತನಾಡುತ್ತಿದ್ದರು.

"ಅಯ್ಯಾ! ಮನುಷ್ಯ ಇದ್ದರೆ ಒಳ್ಳೆ ಸಂಗೀತಗಾರನಾಗಿರಬೇಕು—ನಮ್ಮ ಪಿಟೀಲು ಅನಂತರಂಗಯ್ಯನ ಹಾಗೆ!"

"ಅಯ್ಯೋ ಪಿಟೀಲು ಕಲಿತರೆ ಏನಯ್ಯಾ! ಸೂಳೆಯೂ ಕಲಿಯುತ್ತಾಳೆ. ಚೆನ್ನಾಗಿ ಓದಿ, ಝುಮ್ಮಂತ ಕಾಲೇಜಿನಲ್ಲಿ ಪ್ರೊಫೆಸರಾದರೆ—"

"ಅದೆಲ್ಲ ಇಲ್ಲಪ್ಪ. ಕಸರತ್ತು ಮಾಡಿ, ಖುವತ್ತಾಗಿ ತಿಂದು, ಸ್ಯಾಂಡೋ ಮರಿಯಾಗಬೇಕೊ—ಇಲ್ಲದಿದ್ದರೆ— "

ಹೀಗೆಯೆ ಒಬ್ಬೊಬ್ಬರು ಒಂದೊಂದನ್ನು, ತಮ್ಮ ಮನಸ್ಸಿಗೆ ಹಿಡಿದುದನ್ನು, ಆಗಬೇಕೆಂದು ಹೇಳುತ್ತಿರುವಾಗ ಕಾಳಯ್ಯನೆಂಬವನು "ನೀವು ಯೇಳೋದೂನೆ ಆಗಲಿ ಬುದ್ದಿ. ನಾನು ಮಾತ್ರ ಯೇಳೋದು: ನೇಗಿಲಿದ್ದಿ ಉಳಬೇಕು, ಬೆಳೆಬೇಕು, ಕುಯ್ಯಬೇಕು, ತಿನ್ನಬೇಕು—ಪಸಂದಾಗಿರಬೇಕು" ಎಂದ.

ಅವನ ಮಾತಿಗೆ ಎಲ್ಲರೂ ಘೊಳ್ಳೆಂದರು.

ಕಾಳ ಹೇಳಿದ:

"ನೀವು ತಿಳಿದೋರು ನೆಗಬೌದು. ನಮಗೆ ಚಿನ್ನಾ ಇದ್ದರೆ ಒಗರಾಗಲ್ಲ. ಆದರೆ ಅದಕ್ಕಿಂತ ಕಬ್ಬಿಣ ಎಚ್ಗೆ ಇರ್ಲಿ. ವಜ್ರ, ವೈಡೂರ್ಯ ಬೇಕಾದಂಗಿರ್ಲಿ. ಬೇಡಾ ಅನ್ನಾಲ್ಲ. ಆದರೆ ಅದಕ್ಕಿಂತ ಕಲ್ಲು ಮಣ್ಣು ಎಚ್ಗೇ ಇರ್ಲಿ."

ಮುತ್ತಿನಂಥ ಮಾತು!

# ಕಾವ್ಯ

ನಿಶೆಯ ಶೀತಲಸ್ಪರ್ಶಕ್ಕೆ ಇಳೆಹೊತ್ತು ಹಿಂಜರಿಯುತ್ತಿದ್ದ ವೇಳೆ. ಕೊಳದ ಹೊಂದೆರೆಗಳು ಕಾಳಿಮವಾಗುತ್ತಿದ್ದ ಕಾಲ. ಗೋಧೂಳಿಯ ಅವಸಾನ ಸಮಯ.

ಕೊಳದ ತೀರದ ಕಲ್ಲು ಮೆಟ್ಟಿಲ ಮೇಲೆ ನೀರನೀರೆಯರಿಬ್ಬರು ಬಾಹ್ಯ ಪ್ರಪಂಚ ಜ್ಞಾನಶೂನ್ಯರಾಗಿ ಒಬ್ಬರ ತೆಕ್ಕೆಯಲ್ಲೊಬ್ಬರು ಅಡಗಿದ್ದರು. ತನ್ನ ವಕ್ಷದಲ್ಲಿದ್ದ ನೀರೆಯ ತಲೆಯ ಮುಂಗುರುಳುಗಳನ್ನು ತಿದ್ದುತ್ತ ನೀರಸು ಆವಳ ಕಿವಿಯಲ್ಲಿ ಏನೋ ಅವ್ಯಕ್ತಮಧುರವಾಗಿ ಪಿಸುಗುಡು ತ್ತಿದ್ದ.

ಭೂಮಿಗೆ ಇರುಳಿನ ಜವನಿಕೆ ಪೂರ ಬಿದ್ದಿತ್ತು.

ಚಂದ್ರೋದಯವಾಯಿತು. ಗುಂಡಾದ ಹೊನ್ನಿನ ಕಾಂಡಪಟದಲ್ಲಿ ರೇಖಿಸಿದ ಛಾಯಾಚಿತ್ರದಂತಿತ್ತು—ಆ ನೀರನೀರೆಯರ ಬೆನ್ನಿಗೆ ಚಂದ್ರ ಬಿಂಬವು ಬಂದು ನಿಲಲು.

ಚಂದ್ರಮಂಡಲವು ಏರಿ, ಒಂದು ಅಲೌಕಿಕವಾದ ಅಪೂರ್ವ ಕಳೆಯನ್ನು ಆ ಪ್ರಣಯಿಗಳ ಮೇಲೆ ಬೀರಿ ಸುತ್ತ ಹರಿಸಿತು.

ಕೊಳದ ಕಿರುದೆರೆಗಳು ಚಂದ್ರಬಿಂಬಗಳಿಗೆ ಮುತ್ತಿಕ್ಕಿ ನಲಿಯುತ್ತಿದ್ದುವು. ಸಂಧ್ಯಾಸಮೀರಣನು ತಂದು ಚೆಲ್ಲಿಹೋದ ಒಂದು ಅಪಾರ್ಥಿವ ಸುಗಂಧವು ವಾಯುಮಂಡಲದಲ್ಲಿ ತೇಲಿ ಜಾರುತ್ತಿತ್ತು.

ಹೃದಯದಲ್ಲಿ ಆವುದೋ ಒಂದು ತಂತಿ ಮಿಡಿಯಿತು.

'ಇದೂ ಒಂದು ಕಾವ್ಯ' ಎನಿಸಿತು.

# ಒಂದು ಹನಿ!

ಮಹಾ ಸಾಗರವು ಅಸಾಧ್ಯವಾಗಿ ಘೂರ್ಣಿಸುತ್ತಿತ್ತು. ಹತ್ತೂ ಕಡೆಗಳಿಂದ ಹೊಳೆಗಳು ಬಂದು ಸಾಗರವನ್ನು ಉಕ್ಕಿಸುತ್ತಿದ್ದುವು. ಸಾಗರಕ್ಕೆ ಹತ್ತು ಭುಜ ಬಂದಂತಿತ್ತು.

ಹೀಗೆ ಮಹಾ ಪ್ರವಾಹಗಳು ಬಂದು ಸಂಗಮವಾಗುತ್ತಿರುವಾಗ, ಮಳೆಮೋಡದಿಂದ ಒಂದು ಹನಿಯು ಜಾರಿತು. ಜಾರಿ, ತಾನು ಹೋಗಿ ಸೇರಲಿರುವ ಸಮುದ್ರವನ್ನೂ ಅದನ್ನು ಉಕ್ಕಿಸುತ್ತಿರುವ ಹೊನಲುಗಳನ್ನೂ ಕಂಡು ಬೆರಗಾಗಿ, ತನ್ನನ್ನೂ ಅವುಗಳನ್ನೂ ತುಲನೆಮಾಡಿಕೊಂಡು ಸಿಗ್ಗಾಗಿ, ಹಾಗೆಯೆ ನಡುದಾರಿಯಲ್ಲಿ ನಿಂತಿತು.

ಅದರ ತಡೆಯನ್ನು ಕಂಡು ಗಭೀರ ಹೃದಯದ ಕಡಲು ಪ್ರೀತಿಯ ನಗುವುಕ್ಕಿಸುತ್ತ "ಬಾ! ಬಾ! ಇಷ್ಟು ಸಿಗ್ಗೇಕೆ? ನಿನ್ನಂತಹ ಹನಿಗಳು ಕೂಡಿಯಲ್ಲವೆ ನಾನು ಹೀಗೆ ಬೆಳೆದಿರುವುದು. ಬಾ! ಸಿಗ್ಗನುಳಿ!" ಎಂದು ಕೈ ನೀಡಿ ಕರೆಯಿತು.

ಹನಿಯು ಆನಂದದಿಂದ ಪರವಶವಾಗಿ ಕಣ್ಣು ಮುಚ್ಚಿಕೊಂಡು ಜಾರಿತು. ಸಾಗರವನ್ನು ಸೇರಿತು!